ನಂತರ ಸದರಿಯವರು ಎ.ಡಿ.ಪಿ. ಯವರ ಪಾಟೀ ಸವಾಲಿಗೆ ಉತ್ತರಿಸುತ್ತ ದಿನಾಂಕ: 2.6.2001 ರಂದು ಸದರಿಯವರನ್ನು ಹಾಗೂ ಮುನ್ನಾ ಮನಸೂರ ನಬೀಸಾಬ ಎಂಬುವವರನ್ನು ಕಿಣೆ ಗ್ರಾಮದ ಹತ್ತಿರ ಬೆಳಗಾಂವ-ಜಾಂಬೋಟಿ ರಸ್ತೆಯ ಮೇಲೆ ಪಂಚರೆಂದು ಕರೆದು ಪೊಲೀಸರ ವಶದಲ್ಲಿದ್ದ ಇಬ್ಬರು ಆರೋಪಿತರನ್ನು, ಅಕ್ರಮವಾಗಿ ಸಾಗಾಟ ಮಾಡುತ್ತಿದ್ದ ಮಾರುತಿ ಕಾರ ನಂ. ಜಿಎ-01-ಬಿ-8795ನ್ನು ಸದರಿಯವರಿಗೆ ತೋರಿಸಿದ್ದಾರೆ ಎನ್ನುವುದು ಸರಿಯಲ್ಲವೆಂದು ಹೇಳಿದ್ದಾರೆ. ಅದೇ ರೀತಿಯಾಗಿ ಅವರ ಸಮಕ್ಷಮದಲ್ಲಿ ಸದರಿ ವಾಹನದಲ್ಲಿದ್ದ ಮದ್ಯದ ಪೆಟ್ಟಿಗೆಗಳನ್ನು, ವಾಹನವನ್ನು ಹಾಗೂ ಆರೋಪಿತರಿಂದ ಹಣ ರೂ. 28,100/- ಗಳನ್ನು, ಆರ್.ಸಿ. ಪುಸ್ತಕವನ್ನು ಜಪ್ತು ಮಾಡಿದ್ದಾರೆ ಎನ್ನುವುದು ಸರಿಯಲ್ಲವೆಂತಲೂ ಹಾಗೂ ಮಾದರಿಗಾಗಿ ಪ್ರತಿಯೊಂದು ಪೆಟ್ಟಿಗೆಯಿಂದ ಮದ್ಯದ ಬಾಟಲಿಗಳನ್ನು ಅವರ ಸಮಕ್ಷಮದಲ್ಲಿ ತೆಗೆದಿದ್ದಾರೆ ಎನ್ನುವುದು ಸರಿಯಲ್ಲವೆಂತಲೂ ನಿಪಿ-5 ರಲ್ಲಿ ಬರೆದ ಪ್ರಕಾರ ನಸುಕಿನ 3.10 ರಿಂದ 5.00 ಗಂಟೆಯವರೆಗೆ ಪಂಚನಾಮೆ ತಯಾರಿಸಿ ಆರೋಪಿತರನ್ನು ದಸ್ತಗಿರಿ ಮಾಡಿ ವಾಹನ, ಮದ್ಯ ಮತ್ತು ಹಣ ಇವುಗಳನ್ನು ಜಪ್ತಿ ಮಾಡಿದ್ದಾರೆ ಎನ್ನುವುದು ಸರಿಯಲ್ಲವೆಂತಲೂ ಹೇಳಿದ್ದಾರೆ. ಈ ದಿನ ಪ್ರಾಧಿಕಾರದ ಮುಂದೆ ಹಾಜರಿ ಇರುವ ಒಂದನೇ ಆರೋಪಿ ಸದರಿ ದಿನದಂದು ವಾಹನದಲ್ಲಿ ಹಾಜರಿ ಇದ್ದದ್ದನ್ನು ನಾನು ನೋಡಿದ್ದೇನೆ ಎನ್ನುವುದು ಸರಿಯಲ್ಲವೆಂತಲೂ ಆರೋಪಿತರಿಗೆ ಸಹಾಯವಾಗಲು ನಾನು ಸುಳ್ಳು ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲವೆಂದು ಹೇಳಿದ್ದಾರೆ.

ಶ್ರೀ ವಿಜಯಕುಮಾರ ವೀರಭದ್ರಪ್ಪಾ ತಳವಾರ, ಪಿ.ಎಸ್.ಐ, ಗದಗ ಶಹರ ಇವರು ಈ ಪ್ರಕರಣದಲ್ಲಿ ತನಿಖಾಧಿಕಾರಿಗಳಾಗಿದ್ದು, ಅವರ ಹೇಳಿಕೆಯನ್ನು ಪ್ರಾ.ಸಾ-5 ರಂತೆ ಪಡೆಯಲಾಯಿತು. ಸದರಿಯವರು ಈ ಪ್ರಾಧಿಕಾರದ ಮುಂದೆ ದಿನಾಂಕ: 13.11.2003 ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿದ್ದಾರೆ. ಸದರಿಯವರು ದಿನಾಂಕ: 16.3.2001 ರಿಂದ 15.07.2001 ರ ವರೆಗೆ ಬೆಳಗಾಂವ ಗ್ರಾಮೀಣ ಪಿ.ಎಸ್.ದಲ್ಲಿ ಪಿ.ಎಸ್.ಐ. ರಾಗಿ ಕಾರ್ಯನಿರ್ವಹಿಸಿದ್ದಾಗಿ ತಿಳಿಸಿದ್ದಾರೆ. ದಿನಾಂಕ: 2.6.2001 ರಂದು ಠಾಣೆ ಇನ್‌ಚಾರ್ಜ್‌ದಲ್ಲಿದ್ದಾಗ ಬೆಳಿಗ್ಗೆ 6.30 ಕ್ಕೆ ಬೆಳಗಾಂವ ಗ್ರಾಮೀಣ ಪೊಲೀಸ್ ಇನ್ಸ್‌ಪೆಕ್ಟರ್‌ರಾದ ಶ್ರೀ ಗಂಗರೆಡ್ಡಿ ಇವರು ಈ ಪ್ರಕರಣದ ಆರೋಪಿತರು ಹಾಗೂ ಮದ್ಯದ ಪೆಟ್ಟಿಗೆಗಳು, ಅದನ್ನು ಸಾಗಾಟ ಮಾಡುತ್ತಿದ್ದ ವಾಹನ ಮಾರುತಿ ಕಾರ್ ನಂ. ಜಿಎ-01-ಬಿ-8795 ಮತ್ತು ರೋಖ ಹಣದೊಂದಿಗೆ ಠಾಣೆಗೆ ಬಂದು ಹಾಜರಾಗಿ ಸರಕಾರದ ಪರವಾಗಿ ತಮ್ಮ ಲಿಖಿತ ಫಿರ್ಯಾದನ್ನು ಕೊಟ್ಟಿದ್ದನ್ನು ಸದರಿಯವರು ಠಾಣೆ ಗುನ್ನೆ ನಂ. 75/2001 ರಲ್ಲಿ ದಾಖಲು ಮಾಡಿಕೊಂಡು ಪ್ರಥಮ ವರ್ತಮಾನ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ಅದರ ದೃಢೀಕೃತ ಪ್ರತಿಯನ್ನು ಈಗಾಗಲೇ ನಿಪಿ-6 ಎಂದು ಗುರುತಿಸಲಾಗಿದೆ. ಅವರು ಹಾಜರುಪಡಿಸಿದ ಮಾಲು, ಜಪ್ತಿ ಪಂಚನಾಮೆಯ ದೃಢೀಕೃತ ಪ್ರತಿಯನ್ನು ನಿಪಿ-5 ಎಂದು ಗುರುತಿಸಲಾಗಿದೆ. ನಂತರ ಆರೋಪಿತನನ್ನು ಯೋಗ್ಯ ಭದ್ರತೆ ಪಡೆದು ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾಗಿ ತಿಳಿಸಿದ್ದಾರೆ. ದಿನಾಂಕ: 3.6.2001 ರಂದು ಸದರಿ ಪ್ರಕರಣವು ಅಬಕಾರಿ ಕಾಯ್ದೆ ಅಡಿಯಲ್ಲಿ ದಾಖಲಾಗಿದ್ದರಿಂದ ಜಪ್ತಾದ ಮುದ್ದೆ ಮಾಲುಗಳನ್ನು ಹಾಗೂ ದಾಖಲೆಗಳನ್ನು ಅಧಿಕೃತ ಅಧಿಕಾರಿಯವರಿಗೆ ಮುಂದಿನ ಕ್ರಮಕ್ಕಾಗಿ ವರದಿಯೊಂದಿಗೆ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ಸದರಿ ವರದಿಯ ದೃಢೀಕೃತ ಪ್ರತಿಯನ್ನು ನಿಪಿ-1 ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-1(ಎ) ಎಂದು ಗುರುತಿಸಲಾಗಿದೆ. ಈ ಪ್ರಕರಣದಲ್ಲಿ ಜಪ್ತಾಗಿರುವ ವಾಹನದ ಚಾಲಕನೇ ಸದರಿ ವಾಹನದ ಮಾಲಿಕನಿದ್ದು, ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡುತ್ತಿರುವಾಗ ಸಿಕ್ಕಿಬಿದ್ದಿರುವುದರಿಂದ ಸದರಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿಕೊಂಡಿದ್ದಾರೆ.

ನಂತರ ಸದರಿಯವರು ವಾಹನ ಮಾಲಿಕರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ ವಾಹನ ಮಾಲಿಕರದು ಯಾವುದೇ ತಪ್ಪು ಇಲ್ಲದೇ ಇದ್ದರೂ ಸಿ.ಪಿ.ಐ. ರವರು ಫಿರ್ಯಾದು ಕೊಟ್ಟಿದ್ದರಿಂದ ಸುಳ್ಳು ಕೇಸು ದಾಖಲು ಮಾಡಿದ್ದೇನೆ ಎನ್ನುವುದು ಸರಿಯಲ್ಲವೆಂದು ಹೇಳಿದ್ದಾರೆ.

ನಂತರ ವಾಹನ ಮಾಲಿಕರ ಪರ ವಕೀಲರ ವಿನಂತಿಯಂತೆ ದಿನಾಂಕ: 18.12.2003 ರಂದು ಪಾಟೀ ಸವಾಲಿಗೆ ಉತ್ತರಿಸುತ್ತ ಘಟನೆ ನಡೆದಾಗ ಜಪ್ತಾದ ವಾಹನವನ್ನು ದಿಲೀಪ ದೇಸಾಯಿ ಎನ್ನುವವನು ನಡೆಸುತ್ತಿದ್ದನು ಎನ್ನುವುದು ಸರಿಯಲ್ಲವೆಂದು ವಾಹನ ಮಾಲಿಕನೇ ವಾಹನವನ್ನು ನಡೆಸುತ್ತಿದ್ದನು ಎಂದು ತಿಳಿಸಿದ್ದಾರೆ. ವಾಹನ ಮಾಲಿಕನು ಸದರಿ ದಿನದಂದು ವಾಹನದಲ್ಲಿರಲಿಲ್ಲ ಎನ್ನುವುದು ಸರಿಯಲ್ಲ ಎಂದು ತಿಳಿಸಿದ್ದಾರೆ. ಬಂಧಿತ ಆರೋಪಿತರನ್ನು ಸದರಿಯವರು ನ್ಯಾಯಾಲಯಕ್ಕೆ ಹಾಜರು ಪಡಿಸಿರುವುದಿಲ್ಲ ಎನ್ನುವುದು ಸರಿ ಎಂದು ಹೇಳಿ ಸದರಿ ಪ್ರಕರಣದಲ್ಲಿ ವಾಹನ ಶೋಧನೆ ಮಾಡುವ ಮೊದಲು ಸರ್ಚ್‌ವಾರಂಟ್ ಪಡೆದಿದ್ದರೋ ಇಲ್ಲವೋ ಎಂಬುದು ತನಗೆ ಗೊತ್ತಿಲ್ಲವೆಂದು ತಿಳಿಸಿದ್ದಾರೆ. ಅದೇ ರೀತಿಯಾಗಿ ಪಿ.ಎಫ್. ಕಳಿಸಲು ಏಕೆ ತಡವಾಗಿದೆ ಎಂದು ಈಗ ಹೇಳಲು ಬರುವುದಿಲ್ಲ ಎಂದು ತಿಳಿಸಿದ್ದಾರೆ. ಆದರೆ ಕಾರ್ಯ ಒತ್ತಡದಿಂದ ಆಗಿರಬಹುದು ಎಂದು ಹೇಳಿದ್ದಾರೆ. ಈ ಪ್ರಕರಣದಲ್ಲಿ ಜಪ್ತಾಗಿರುವ ಹಣ ಮದ್ಯದ ವ್ಯಾಪಾರಕ್ಕೆ ಸಂಬಂಧ ಇರುವುದಿಲ್ಲ ಎಂದರೆ ಸರಿಯಲ್ಲವೆಂತಲೂ ಮೇಲಾಧಿಕಾರಿಗಳ ಮಾತು ಕೇಳಿ ಸುಳ್ಳು ಫಿರ್ಯಾದು ಹಾಕಿದ್ದೇನೆ ಎನ್ನುವುದು ಸರಿಯಲ್ಲವೆಂದು ಹೇಳಿದ್ದಾರೆ. ಅದೇ ರೀತಿಯಾಗಿ ವಾಹನ ಮಾಲಿಕನು ತಪ್ಪು ಮಾಡಿಲ್ಲ ಎನ್ನುವುದು ಸರಿಯಲ್ಲ ಎಂದು ಹೇಳಿದ್ದಾರೆ.

ಈ ಪ್ರಕರಣದಲ್ಲಿ ಪಂಚ ಸಾಕ್ಷಿದಾರರಾದ ಪ್ರಾ.ಸಾ-3 ಹಾಗೂ ಪ್ರಾ.ಸಾ-4 ಪ್ರತಿಕೂಲ ಸಾಕ್ಷ್ಯ ನೀಡಿದ್ದರೂ ಸಹ ತನಿಖಾಧಿಕಾರಿ ತೃಪ್ತಿಕರ ಸಾಕ್ಷ್ಯ ನೀಡಿದರೆ ಅವರ ಸಾಕ್ಷ್ಯವನ್ನು ನಂಬಬಹುದಾಗಿದೆ. ಈ ಪ್ರಕರಣದಲ್ಲಿ ಪ್ರಾಧಿಕಾರಕ್ಕೆ ಅಬಕಾರಿ ಅಪರಾಧದಲ್ಲಿ ವಾಹನವನ್ನು ಜಪ್ತಿ ಮಾಡಿಕೊಳ್ಳಲಾಗಿದೆಯೆಂದು ತೃಪ್ತಿಕರವಾಗಿ ಮನವರಿಕೆಯಾದರೆ ಕಾನೂನು ಪ್ರಕಾರ ಸಾಕಾಗಬಹುದೇ ಹೊರತು ಸಂಗತಿಯನ್ನು ಸಂಶಯಾತೀತವಾಗಿ ರುಜುವಾತು ಪಡಿಸುವ ಅಗತ್ಯ ಇರುವುದಿಲ್ಲ. ಅಲ್ಲದೇ ಐ.ಎಲ್.ಆರ್. 1978 ಸುಪ್ರೀಮ್ ಕೋರ್ಟ್ ಪುಟ ಸಂ. 151ರಲ್ಲಿ ನಮೂದಿಸಿದಂತೆ

"If the evidence of the investigating officer who recovered the materials object is concerning the evidence as to recovery need not be rejected on the ground that the seizure witness do not support the prosecution version."

ಆದ್ದರಿಂದ ಪ್ರಾ.ಸಾ-1, ಪ್ರಾ.ಸಾ-2 ಹಾಗೂ ಪ್ರಾ.ಸಾ-5 ಇವರ ಹೇಳಿಕೆಯ ಮೇಲೆ ದಿನಾಂಕ 2.6.2001 ರಂದು ವಾಹನ ಮಾರುತಿ ಕಾರ್ ನಂ. ಜಿಎ-01-ಬಿ-8795 ರಲ್ಲಿ ಮದ್ಯದ ಅಕ್ರಮ ಸಾಗಾಣಿಕೆಯಾಗಿರುವುದು ನಿಜವೆಂದು ಕಂಡು ಬರುತ್ತದೆ. ಆದ್ದರಿಂದ ಒಂದನೆಯ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಶ್ರೀ ರಾವಸಾಹೇಬ ಅಪ್ಪಾಸಾಹೇಬ ರಾಣೆ, ಸಾತೇರಿ, ಗೋವಾ ಇವರು ವಾಹನ ಮಾಲಿಕರಿದ್ದು ಇವರ ಹೇಳಿಕೆಯನ್ನು ಡಿ.ಡಬ್ಲ್ಯೂ-1 ಆಗಿ ಪಡೆಯಲಾಗಿದೆ. ಸದರಿಯವರು ದಿನಾಂಕ: 18.12.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿದ್ದಾರೆ. ಸದರಿಯವರು ಈ ಪ್ರಕರಣದಲ್ಲಿ ಜಪ್ತಾಗಿರುವ ಮಾರುತಿ ಕಾರ್ ನಂ. ಜಿಎ-01-ಬಿ-8795ರ ನೋಂದಾಯಿತ ಮಾಲಿಕನಿರುವುದಾಗಿಯೂ ಈ ಕುರಿತು ಆರ್.ಸಿ. ಪುಸ್ತಕವನ್ನು ಈಗಾಗಲೇ ಹಾಜರುಪಡಿಸಿದ್ದೇನೆ ಎಂದು ತಿಳಿಸಿದರು. ಅದನ್ನು ನಿಪಿ-1 ಎಂದು ಗುರುತಿಸಲಾಯಿತು. ವಾಹನವು ಇಲಾಖೆ ವಶದಲ್ಲಿದ್ದು ಅದನ್ನು ಈಗಾಗಲೇ ಮುದ್ದೆಮಾಲು-1 ಎಂದು ಗುರುತಿಸಲಾಗಿದೆ. ಸದರಿ ವಾಹನವನ್ನು ದಿನಾಂಕ: 7.3.2001ರಂದು ಖರೀದಿಸಿದ್ದಾಗಿಯೂ ಅದಕ್ಕೆ ದಿಲೀಪ ದೇಸಾಯಿ ಚಾಲಕ ಎಂದು ಕೆಲಸ ಮಾಡುತ್ತಿದ್ದುದಾಗಿ ಹೇಳಿದ್ದಾರೆ. ಹಾಗೂ ಅದನ್ನು ದಿನಾಂಕ: 2.6.2001 ರಂದು ಅವನೇ ನಡೆಸುತ್ತಿದ್ದಾಗಿ ಹೇಳಿದ್ದಾರೆ. ಸದರಿ ವಾಹನವನ್ನು ಬೆಳಗಾಂವಿಯ ಗ್ರಾಮೀಣ ಪೊಲೀಸ್ ಠಾಣೆ ಪೊಲೀಸರು ಜಪ್ತಿ ಮಾಡಿದ್ದು ಸದರಿಯವರಿಗೆ ದಿನಾಂಕ: 4.6.2001 ರಂದು ಗೊತ್ತಾಗಿದ್ದಾಗಿ ಹೇಳಿದ್ದಾರೆ. ವಿಷಯ ಗೊತ್ತಾದ ನಂತರ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ವಾಹನ ಬಿಡುಗಡೆಗಾಗಿ ವಿನಂತಿಸಿದ್ದಾಗಿ ತಿಳಿಸಿದ್ದಾರೆ. ಆದರೆ ವಾಹನವನ್ನು ಅವರಿಗೆ ಕೊಟ್ಟಿರುವುದಿಲ್ಲವೆಂದು ತಿಳಿಸಿದ್ದಾರೆ. ಅಧಿಕೃತ ಅಧಿಕಾರಿಯವರು ನೀಡಿದ ಕಾರಣ ಕೇಳಿ ನೋಟೀಸಿಗೆ ಉತ್ತರ ಸಲ್ಲಿಸಿ ಕಾರಿನಲ್ಲಿದ್ದ ರೂ. 28,100/-ಗಳು ಸದರಿಯವರಿಗೆ ಸೇರಿದ್ದು ಅದನ್ನು ಸಹ ವಾಪಸು ಕೊಡಲು ವಿನಂತಿಸಿದ್ದಾಗಿ ತಿಳಿಸಿದ್ದಾರೆ. ತಾನು ಯಾವುದೇ ಅಪರಾಧವನ್ನು ಮಾಡಿಲ್ಲದಿರುವುದರಿಂದ ವಾಹನ ಹಾಗೂ ರೋಖ ಹಣವನ್ನು ಮರಳಿ ಕೊಡಲು ವಿನಂತಿಸಿದ್ದಾರೆ. ಸದರಿ ಅಪರಾಧದ ಬಗ್ಗೆ ಅವರಿಗೆ ಯಾವುದೇ ಮಾಹಿತಿ ಇರುವುದಿಲ್ಲವಾಗಿಯೂ ಸದರಿಯವರ ಮೇಲೆ ಇದರ ಹೊರತಾಗಿ ಯಾವುದೇ ಕೇಸುಗಳು ಇರುವುದಿಲ್ಲ ವೆಂತಲೂ ತಾನು ಯಾವುದೇ ಕಲಂನ್ನು ಉಲ್ಲಂಘಿಸಿರುವುದಿಲ್ಲವೆಂದು ತಿಳಿಸಿದ್ದಾರೆ.

ನಂತರ ಸದರಿಯವರು ಎ.ಡಿ.ಪಿ. ಯವರ ಪಾಟೀಸವಾಲಿಗೆ ಉತ್ತರಿಸುತ್ತ ದಿಲೀಪ ದೇಸಾಯಿ ಈಗ ಎಲ್ಲಿದ್ದಾನೆ ಎಂದು ಹೇಳಲು ಬರುವುದಿಲ್ಲವೆಂತಲೂ ಅವರ ವಿಳಾಸ ವಗೈರೆ ಏನೂ ಗೊತ್ತಿರುವುದಿಲ್ಲ ಎಂದು ತಿಳಿಸಿದ್ದಾರೆ. ದಿನಾಂಕ: 2.6.2001 ರಂದು ರಾತ್ರಿ ನಾನೇ ನನ್ನ ವಾಹನದಲ್ಲಿ ಮೈಕೆಲ್ ವಿಲಿಯಂ ಈತನೊಂದಿಗೆ ಬ್ರ್ಯಾಂಡಿ, ವಿಸ್ಕಿ ಬಾಟಲುಗಳನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದಾಗ ಫಿರ್ಯಾದಿ ಮತ್ತು ಪೊಲೀಸರು ಸದರಿಯವರನ್ನು ಹಿಡಿದು ವಾಹನ ಮತ್ತು ಮದ್ಯವನ್ನು ಜಪ್ತಿ ಮಾಡಿರುತ್ತಾರೆ ಮತ್ತು ಜಪ್ತಿ ಮಾಡಿದ ಹಣ ಅಕ್ರಮವಾಗಿ ಸಾಗಾಟ ಮಾಡಿದ ಮದ್ಯದ ವ್ಯವಹಾರದ ಸಂಬಂಧ ಇಟ್ಟುಕೊಂಡಿದ್ದೆವು ಎಂದರೆ ಸರಿಯಲ್ಲ ಎಂದು ಹೇಳಿದ್ದಾರೆ. ಆ ದಿನ ದಿಲೀಪ ದೇಸಾಯಿ ವಾಹನವನ್ನು ನಡೆಸುತ್ತಿದ್ದನು ಅಂತಾ ನಾನು ಸುಳ್ಳು ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲ ಎಂದು ಹೇಳಿದ್ದಾರೆ. ತಾನು ಮೊದಲಿನಿಂದಲೂ ಅಕ್ರಮ ಮದ್ಯ ಸಾಗಾಟದ ವ್ಯವಹಾರ ಮಾಡುತ್ತಿದ್ದೇನೆ ಎನ್ನುವುದು ಸರಿಯಲ್ಲ ಎಂದು ತಿಳಿಸಿದ್ದಾರೆ. ತಾನು ಅಬಕಾರಿ ಗುನ್ಹೆ ಮಾಡಿರುವುದರಿಂದ ಸದರಿಯವರ ವಾಹನವನ್ನು ಮತ್ತು ಅದರಲ್ಲಿ ಸಾಗಾಟ ಮಾಡುತ್ತಿದ್ದ ಮದ್ಯವನ್ನು ಹಾಗೂ ಅದೇ ವಹಿವಾಟಿಗೆ ಸಂಬಂಧಿಸಿದ ಹಣವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗುತ್ತದೆ ಎನ್ನುವುದು ಸರಿಯಲ್ಲ ಎಂದು ಹೇಳಿದ್ದಾರೆ.

ಸದರಿ ಅಪರಾಧವು ತಮ್ಮ ತಿಳುವಳಿಕೆಗೆ ಬಾರದಂತೆ ನಡೆದಿದ್ದು ಜಪ್ತಾದ ವಾಹನದಲ್ಲಿ ಮದ್ಯದ ಅಕ್ರಮ ಸಾಗಾಟ ನಡೆದಿರುವುದಿಲ್ಲ, ತಾನು ನಿರ್ದೋಶಿ ಎಂದು ಸಿದ್ಧಪಡಿಸುವ ಜವಾಬ್ದಾರಿ ನೊಂದಿತ ವಾಹನ ಮಾಲಿಕನ ಮೇಲೆ ಇರುತ್ತದೆ. ಆದರೆ ಸದರಿ ಪ್ರಕರಣದಲ್ಲಿ ವಾಹನ ಮಾಲಿಕರೇ ಸ್ವತಹ ಮದ್ಯದ ಅಕ್ರಮ ಸಾಗಾಟ ಮಾಡುವಾಗ ಸಿಕ್ಕಿ ಹಾಕಿಕೊಂಡಿದ್ದು ಅವರ ಮೇಲಿನ ಹೇಳಿಕೆಯು ಸತ್ಯಕ್ಕೆ ದೂರವಾಗಿದೆ ಎಂದು ಪ್ರಾಧಿಕಾರಕ್ಕೆ ಮನವರಿಕೆ ಆಗುತ್ತದೆ. ಇಷ್ಟೊಂದು ಪ್ರಮಾಣದಲ್ಲಿ ಹಣವನ್ನು ವಾಹನ ಮಾಲಿಕರು ತಮ್ಮ ಹತ್ತಿರ ಇಟ್ಟುಕೊಂಡು ಮದ್ಯ ಸಾಗಾಟ ಮಾಡುತ್ತಿರುವುದು ನೋಡಿದರೆ ಸದರಿ ಹಣ ಮದ್ಯದ ವಹಿವಾಟಿನಿಂದ ಬಂದದ್ದು ಎಂದು ಪ್ರಾಧಿಕಾರಕ್ಕೆ ಕಂಡು ಬರುತ್ತದೆ. ಆದ್ದರಿಂದ ಎರಡನೆಯ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಮೇಲ್ಕಾಣಿಸಿದ ಕಾರಣದಿಂದ ಜಪ್ತಾದ ವಾಹನವನ್ನು ಹಾಗೂ ಈ ವಹಿವಾಟಿಗೆ ಸಂಬಂಧಿಸಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಕಂಡು ಬಂದಿದ್ದರಿಂದ ಈ ಕೆಳಗಿನ ಆದೇಶ ಹೊರಡಿಸಲಾಗಿದೆ.

**ಆದೇಶ**

ಶ್ರೀ ಪಿ. ಎನ್. ಮುರಗೋಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43(ಎ)ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಪಿ.ಎಸ್.ಐ. ಬೆಳಗಾಂವ ಗ್ರಾಮೀಣ ಪಿ.ಎಸ್. ಇವರು ದಾಖಲು ಮಾಡಿದ ಗುನ್ಹೆ ನಂ. 75/2001 ದಿನಾಂಕ: 2.06.2001 ನೇದ್ದರಲ್ಲಿ ಜಪ್ತಾದ ವಾಹನ ಮಾರುತಿ ಕಾರ್ ಸಂ. ಜಿಎ-01-ಬಿ-8795 ಹಾಗೂ ಇದೇ ಪ್ರಕರಣದಲ್ಲಿ ಜಪ್ತಾದ ರೋಖ ಹಣ ರೂ. 28,100/- ಗಳನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಪ್ರಕರಣದಲ್ಲಿ ಜಪ್ತಾದ ಒಟ್ಟು ಮದ್ಯ 196.890 ಲೀಟರಿನಲ್ಲಿ ಸ್ಯಾಂಪಲ್ ಬಾಟಲು 16.680 ಲೀಟರ್ ಹೊರತುಪಡಿಸಿ ಉಳಿದ 180.210 ಲೀಟರ್ ಮದ್ಯವನ್ನು ಈಗಾಗಲೇ ಈ ಪ್ರಾಧಿಕಾರದ ಆದೇಶ ಸಂ. ಇಎಕ್ಸ್‌ಇ/ಸಿಆರ್ಎಂ/ಡಿಟಿಸಿಆರ್/546/2001-02 ದಿನಾಂಕ: 25.1.2002 ರಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದ್ದೇನೆ. ಹಾಗೂ ಸದರಿ ಮದ್ಯವನ್ನು ಕಾನೂನು ಬದ್ಧವಾಗಿ ವಿಲೇವಾರಿ ಮಾಡಲು ಸಹ ಅಬಕಾರಿ ಇನ್ಸ್‌ಪೆಕ್ಟರ್, ದಕ್ಷಿಣ ವಲಯ, ಬೆಳಗಾಂವ ಇವರಿಗೆ ಆದೇಶಿಸಿದ್ದೇನೆ.

ಈ ಆದೇಶವನ್ನು ಇಂದು ದಿನಾಂಕ: 29.01.2004 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಣ ಮಾಡಿಸಿ ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಪಿ. ಎನ್. ಮುರಗೋಡ**

ಅಧಿಕೃತ ಅಧಿಕಾರಿಗಳು ಹಾಗೂ, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

| | | | |
|---|---|---|---|
| ಪ್ರಾ.ಸಾ. 1 | - | ಶ್ರೀ ಹೆಚ್. ಆರ್. ಚಿಕ್ಕಜಂಬಗಿ, ಅಬಕಾರಿ ಸಬ್ ಇನ್ಸ್‌ಪೆಕ್ಟರ್, ದಕ್ಷಿಣ ಉಪ ವಲಯ ನಂ-2, ಬೆಳಗಾಂವ | - ತನಿಖಾಧಿಕಾರಿ |
| ಪ್ರಾ.ಸಾ. 2 | - | ಶ್ರೀ ಶ್ರೀಪತಿ ಹಣಮಂತಪ್ಪಾ ಗಂಗರೆಡ್ಡಿ, ಡಿ.ಎಸ್.ಪಿ., ಡಿ.ಸಿ.ಆರ್.ಡಿ. ಬೆಳಗಾಂವ | - ಫಿರ್ಯಾದುದಾರರು |
| ಪ್ರಾ.ಸಾ. 3 | - | ಶ್ರೀ ಮನಸೂರ ನಬೀಸಾಬ ನಬಿವಾಲೆ | - ಪಂಚ |
| ಪ್ರಾ.ಸಾ. 4 | - | ಶ್ರೀ ನಾಗೇಂದ್ರ ಯಲ್ಲಪ್ಪ ಇಂಚಲ, ಮಚ್ಚೆ, ಬೆಳಗಾಂವ | - ಪಂಚ |
| ಪ್ರಾ.ಸಾ. 5 | - | ಶ್ರೀ ವಿಜಯ ಕುಮಾರ ವೀರಭದ್ರಪ್ಪಾ ತಳವಾರ, ಪಿ.ಎಸ್.ಐ, ಗದಗ ಶಹರ | - ತನಿಖಾಧಿಕಾರಿ |

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | | |
|---|---|---|
| ನಿಶಾನೆ ಪಿ-1 | - | ಪಿ.ಎಸ್.ಐ. ಬೆಳಗಾಂವ ಗ್ರಾಮೀಣ ಪಿ.ಎಸ್. ರವರಿಂದ ಪ್ರಕರಣವನ್ನು ವರ್ಗಾಯಿಸುವ ಕುರಿತು ಪತ್ರ. |
| ನಿಶಾನೆ ಪಿ-1ಎ | - | ಅದರ ಮೇಲಿನ ಸಹಿ |
| ನಿಶಾನೆ ಪಿ-2 | - | ರಾಸಾಯನಿಕ ವರದಿಯ ದೃಢೀಕೃತ ಫೋಟೋ ಪ್ರತಿ |
| ನಿಶಾನೆ ಪಿ-2ಎ | - | ಅದರ ಮೇಲಿನ ಸಹಿ |
| ನಿಶಾನೆ ಪಿ-3 | - | ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ವಿನಂತಿಸಿ ಬರೆದ ಪತ್ರ. |
| ನಿಶಾನೆ ಪಿ-3ಎ | - | ಅದರ ಮೇಲಿನ ಸಹಿ |
| ನಿಶಾನೆ ಪಿ-4 | - | ಜಪ್ತಾದ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಆದೇಶ |
| ನಿಶಾನೆ ಪಿ-5 | - | ಪಂಚನಾಮೆಯ ದೃಢೀಕೃತ ಪ್ರತಿ |
| ನಿಶಾನೆ ಪಿ-5ಎ | - | ಅದರ ಮೇಲಿನ ಸಹಿ |
| ನಿಶಾನೆ ಪಿ-6 | - | ಫಿರ್ಯಾದಿನ ದೃಢೀಕೃತ ಪ್ರತಿ |
| ನಿಶಾನೆ ಪಿ-6ಎ | - | ಅದರ ಮೇಲಿನ ಸಹಿ. |

**ಅನುಬಂಧ-3**

**ಫಿರ್ಯಾದುದಾರರ ಪರ ಗುರುತಿಸಲಾದ ವಸ್ತುಗಳು**

1. ಮುದ್ದೆ ಮಾಲು -1 - ಜಪ್ತಾದ ವಾಹನ
2. ಮುದ್ದೆ ಮಾಲು -2 - ಮಾದರಿ ಮದ್ಯದ ಬಾಟ್ಲಿಗಳು.
3. ಮುದ್ದೆ ಮಾಲು -3 - ಜಪ್ತಾದ ರೋಖ ಹಣ ರೂ. 28,100/-

**ಅನುಬಂಧ-4**

**ವಾಹನ ಮಾಲಿಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

ಡಿ.ಡಬ್ಲ್ಯೂ-1 - ಶ್ರೀ ರಾವಸಾಹೇಬ ಅಪ್ಪಾಸಾಹೇಬ ರಾಣೆ, ಸಾತೇರಿ, ಗೋವಾ
- ವಾಹನ ಮಾಲಿಕ

**ಅನುಬಂಧ-5**

**ವಾಹನ ಮಾಲಿಕರ ಪರವಾಗಿ ಗುರುತಿಸಲಾದ ದಾಖಲೆಗಳು:**

ನಿಡಿ-1 - ಆರ್.ಸಿ. ಪುಸ್ತಕ

**ಪಿ. ಎನ್. ಮುರಗೋಡ**

ಪಿ.ಆರ್.327

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಬೆಳವಾಂವ ಜಿಲ್ಲೆ, ಬೆಳಗಾಂವ.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯ**

**ಫಿರ್ಯಾದುದಾರರು** ವಿರುದ್ಧ **ಪ್ರತಿವಾದಿಗಳು:**

ಅಬಕಾರಿ ಉಪ ನಿರೀಕ್ಷಕರು,
ಉಪ ವಿಭಾಗ, ಮಂಡ್ಯ.

1. ರವಿಕುಮಾರ್ ಬಿನ್ ಕೆಂಪೇಗೌಡ,
   ಅಘಲಯ ಗ್ರಾಮ. ಕೆ.ಆರ್.ಪೇಟೆ ತಾ:
2. ರಾಜೇಶ್ ಬಿನ್ ಕೆಂಪೇಗೌಡ,
   ಅಘಲಯ ಗ್ರಾಮ, ಕೆ.ಆರ್.ಪೇಟೆ ತಾ:

ದಿನಾಂಕ: 7.2.2003 ರಂದು ಸಂಜೆ 4.30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ- ರವರು ಕೆ.ಆರ್. ಪೇಟೆ ತಾಲ್ಲೂಕು ಅಘಲಯ ಗ್ರಾಮದ ರವಿಕುಮಾರ್ ಬಿನ್ ಕೆಂಪೇಗೌಡರಿಗೆ ಸೇರಿದ ಚಿಲ್ಲರೆ ಅಂಗಡಿಯಲ್ಲಿ 1,800 ಲೀ. ಮದ್ಯ ಮತ್ತು ಸದರಿ ಅಂಗಡಿಯ ಮುಂದೆ ನಿಂತಿದ್ದ ವಾಹನ ಆಟೋರಿಕ್ಷಾ ಸಂಖ್ಯೆ: ಕೆಎ-02/2067-ರಲ್ಲಿ ಅಕ್ರಮವಾಗಿ 11.160 ಲೀ. ಮದ್ಯವನ್ನು ಹೊಂದಿ ದಾಸ್ತಾನು ಮಾಡಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 41/2002-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ) ಮತ್ತು 43 (ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಕೆ.ಆರ್.ಪೇಟೆ ವಲಯ-ರವರು ದಿನಾಂಕ: 17.3.2003 ರಂದು ವರದಿಯನ್ನು ಸಲ್ಲಿಸಿ ಈ ಪ್ರಕರಣದಲ್ಲಿ ಮಾದರಿ ತೆಗೆದ ಸೀಸೆಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ ಹಾಗೂ ವಾಹನ ಮತ್ತು ಮದ್ಯವನ್ನು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ ಸದರಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಇವರ ವರದಿಯಂತೆ ಸದರಿ ಮದ್ಯವನ್ನು ಮಾದರಿ ಹೊರತುಪಡಿಸಿ, ದಿನಾಂಕ: 16.12.2003ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.1.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು ದಿನಾಂಕ: 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತು ಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಮದ್ಯವನ್ನು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 12.960 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು 1 ವರ್ಷ ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:508:02-03 ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು ಮಂಡ್ಯ ಜಿಲ್ಲೆ, ಮಂಡ್ಯ- ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ, ಮಂಡ್ಯ -ರವರ ಪ್ರ.ಮಾ.ವ ಸಂಖ್ಯೆ: 41/2002-03 ದಿನಾಂಕ: 7.2.2003 ರಲ್ಲಿ ವಶಪಡಿಸಿಕೊಂಡ ವಾಹನ ಆಟೋರಿಕ್ಷಾ ಸಂಖ್ಯೆ ಕೆಎ-02/2067-ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು,

ಪಿ.ಆರ್.328                ಮಂಡ್ಯ ಜಿಲ್ಲೆ, ಮಂಡ್ಯ.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ-ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಅಬಕಾರಿ ನಿರೀಕ್ಷಕರು, | 1. | ರಾಜು ಬಿನ್ ಸಿದ್ದರಾಮಯ್ಯ, |
| ಮಂಡ್ಯ ವಲಯ | | ಹಳೇಬೂದನೂರು ಗರೀಬಿ ಸೈಟ್, ಮಂಡ್ಯ ತಾ: |

ದಿನಾಂಕ: 12.8.2003 ರಂದು ಮಧ್ಯಾಹ್ನ 1.00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ-ರವರು ಮಂಡ್ಯ ಸಿಟಿಯ ಮೈಸೂರು-ಬೆಂಗಳೂರು ರಸ್ತೆಯ ಅಸಿಟೇಟ್ ಫ್ಯಾಕ್ಟರಿ ಸರ್ಕಲ್ ಬಳಿ ವಾಹನ ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ: ಇರುವುದಿಲ್ಲ-ರಲ್ಲಿ ಅಕ್ರಮವಾಗಿ 4.320 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 5/2003-04 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32 ಮತ್ತು 34 ರಂತೆ ಕ್ರಮ ಜರುಗಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ-ರವರು ದಿನಾಂಕ: 18.9.2003 ಮತ್ತು 7.2.2004 ರಂದು ವರದಿಯನ್ನು ಸಲ್ಲಿಸಿ ಈ ಪ್ರಕರಣದಲ್ಲಿ ಮಾದರಿ ತೆಗೆದ ಸೀಸೆಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ ಹಾಗೂ ವಾಹನ ಮತ್ತು ಮದ್ಯವನ್ನು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ ಸದರಿ ವಾಹನ ಮತ್ತು ಮದ್ಯವನ್ನು

ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಇವರ ವರದಿಯಂತೆ ಸದರಿ ಮದ್ಯವನ್ನು ಮಾದರಿ ಹೊರತುಪಡಿಸಿ ದಿನಾಂಕ: 16.12.2003 ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.01.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು ದಿನಾಂಕ: 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಮದ್ಯವನ್ನು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 4.320 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಆರು (6) ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:61:03-04 ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ- ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ-ರವರ ಪ್ರ.ಮಾ.ವ. ಸಂಖ್ಯೆ: 5:2003-04 ದಿನಾಂಕ: 12.8.2003 ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ: ಇರುವುದಿಲ್ಲ -ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.329

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ-ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಅಬಕಾರಿ ಉಪ ನಿರೀಕ್ಷಕರು, | 1. | ಕೆ. ಕುಮಾರ್ ಬಿನ್ ಕೆಂಪೇಗೌಡ |
| ಉಪ ವಿಭಾಗ, ಮಂಡ್ಯ. | 2. | ಎಸ್. ಮಂಜುನಾಥ್ ಬಿನ್ ಶಿವಣ್ಣ |
| | | ನಂ. 1737, 4ನೇ ಕ್ರಾಸ್, ಹೊಸಹಳ್ಳಿ, ಮಂಡ್ಯ ಸಿಟಿ. |

ದಿನಾಂಕ: 17.2.2003 ರಂದು ರಾತ್ರಿ 10.30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ, ಮಂಡ್ಯ-ರವರು ಮಂಡ್ಯ ಸಿಟಿ ಕೆ. ಕುಮಾರ್ ಬಿನ್ ಕೆಂಪೇಗೌಡರವರಿಗೆ ಸೇರಿದ ಹೊಸಹಳ್ಳಿ 4ನೇ ಕ್ರಾಸ್ ಹೆಂಚಿನ ಮನೆಯಲ್ಲಿ ವಾಹನ ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ: ಕೆಎ-04:ಕೆ-7651 ರಲ್ಲಿ ಅಕ್ರಮವಾಗಿ 3.600 ಲೀ. ಮದ್ಯ ಒಂದು ರೂಂನಲ್ಲಿ 16.740 ಲೀ. ಮದ್ಯ ಮತ್ತು ನಕಲಿ ಮದ್ಯ ತಯಾರು ಮಾಡುವ ಲೇಬಲ್ ಮತ್ತು ಕಾರ್ಕ್‌ಗಳನ್ನು ಹೊಂದಿದ್ದ ಬಗ್ಗೆ ವಾಹನ ಮತ್ತು ಮುದ್ದೇ ಮಾಲನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 43/2002-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34 ರಂತೆ ಕ್ರಮ ಜರುಗಿಸಿರುತ್ತಾರೆ.

ಆರೋಪಿತರಿಗೆ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43 (ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್ ನೀಡಲಾಗಿ ಕೆ. ಕುಮಾರ್‌ಗೆ ದಿನಾಂಕ: 24.12.2003 ರಂದು ಮತ್ತು ಎಸ್. ಮಂಜುನಾಥ್‌ಗೆ ದಿನಾಂಕ: 27.11.2003 ರಂದು ಜಾರಿಯಾಗಿ ಸ್ವೀಕೃತಿಯನ್ನು ಈ ಪ್ರಾಧಿಕಾರಕ್ಕೆ ನೀಡಿರುತ್ತಾರೆ.

ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ-ರವರು ದಿನಾಂಕ: 7.2.2004 ರಂದು ವರದಿಯನ್ನು ಸಲ್ಲಿಸಿ ಈ ಪ್ರಕರಣದಲ್ಲಿ ಮಾದರಿ ತೆಗೆದ ಸೀಸೆಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ ಸದರಿ ಮದ್ಯವು "They donot conforms to the bureau of Indian standard" ಎಂದು ರಾಸಾಯನಿಕ ತಜ್ಞರು ವರದಿ ನೀಡಿರುತ್ತಾರೆ ಹಾಗೂ ವಾಹನ ಮತ್ತು ಮದ್ಯವನ್ನು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.1.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ದಿನಾಂಕ: 24.1.2004 ರಂದು ಸದರಿ ಪ್ರಕಟಣೆಯನ್ನು

ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಮದ್ಯವು "They donot conforms to the bureau of Indian standard" ಎಂದು ರಾಸಾಯನಿಕ ತಜ್ಞರು ವರದಿ ನೀಡಿರುತ್ತಾರೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 20.340 ಲೀ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಹನ್ನೊಂದು (11) ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:530:02-03 ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ- ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ, ಮಂಡ್ಯ-ರವರ ಪ್ರ.ಮಾ.ವ. ಸಂಖ್ಯೆ: 43:2002-03 ದಿನಾಂಕ: 17.2.2003 ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ: ಕೆಎ-04:ಕೆ-7651 ನ್ನು ಮತ್ತು ಮೇಲ್ಕಂಡ ಮುದ್ದೆ ಮಾಲನ್ನು (ಮಾದರಿಯನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.330

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ-ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಶಿವಳ್ಳಿ ಪೊಲೀಸ್ ಠಾಣೆ, ಮಂಡ್ಯ ತಾ: | 1. | ಆರೋಪಿ ಇಲ್ಲಾ. |

ದಿನಾಂಕ: 20.7.2003 ರಂದು ಮಧ್ಯಾಹ್ನ 3.00 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಶಿವಳ್ಳಿ ಪೊಲೀಸ್ ಠಾಣೆ, ಮಂಡ್ಯ ತಾ:-ರವರು ಮಂಡ್ಯ ತಾಲ್ಲೂಕಿನ ಶಿವಳ್ಳಿ-ಗುನ್ನಾಯ್ಕನಳ್ಳಿ ರಸ್ತೆಯ ಮರಡಿಪುರದ ಹತ್ತಿರ ವಾಹನ ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ: ಕೆಎ-09/ಇ-7346 ರಲ್ಲಿ ಅಕ್ರಮವಾಗಿ 5 ಲೀ. ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸಾರಾಯಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 64/2003 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34 ರಂತೆ ಕ್ರಮ ಜರುಗಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ-ರವರು ದಿನಾಂಕ: 7.2.2004 ರಂದು ವರದಿಯನ್ನು ಸಲ್ಲಿಸಿ, ಈ ಪ್ರಕರಣದಲ್ಲಿ ಮಾದರಿ ತೆಗೆದ ಸೀಸೆಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ, ವರದಿ ಪಡೆಯಲಾಗಿ ಸದರಿ ಸಾರಾಯಿಯು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ ಹಾಗೂ ವಾಹನ ಮತ್ತು ಸಾರಾಯಿಯನ್ನು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.1.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ದಿನಾಂಕ: 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಸಾರಾಯಿಯನ್ನು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 5 ಲೀ. ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಆರು (6) ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ, ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ

**ಆದೇಶ ಸಂಖ್ಯೆ: ಡಿಟಿಸಿಆರ್:90:03-04: ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ- ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಆರಕ್ಷಕ ಉಪ ನಿರೀಕ್ಷಕರು, ಶಿವಳ್ಳಿ ಪೊಲೀಸ್ ಠಾಣೆ, ಮಂಡ್ಯ ತಾ: - ರವರ ಪ್ರ.ಮಾ.ವ. ಸಂಖ್ಯೆ:64/2003 ದಿನಾಂಕ: 20.7.2003 ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಸೂಪರ್ ಸ್ಕೂಟರ್ ಸಂಖ್ಯೆ: ಕೆಎ-09/ಇ-7346 ನ್ನು ಮತ್ತು 5 ಲೀ. ಸಾರಾಯಿಯನ್ನು (ಮಾದರಿಯನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.331

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ-ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪ ವಲಯ | | 1. ಆರೋಪಿ ಓಡಿ ಹೋಗಿರುತ್ತಾನೆ. |

ದಿನಾಂಕ: 24.3.2003 ರಂದು ಮಧ್ಯಾಹ್ನ 1.30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪ ವಲಯ ರವರು ಪಾಂಡವಪುರ ತಾಲ್ಲೂಕಿನ ಪಾಂಡವಪುರದಿಂದ ನಾಗಮಂಗಲಕ್ಕೆ ಹೋಗುವ ದಾರಿ ಮಧ್ಯದಲ್ಲಿರುವ ಟಿ.ಎಸ್. ಛತ್ರದ ತಿರುಮಲ ದೇವಸ್ಥಾನದ ಬಳಿ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ ಇರುವುದಿಲ್ಲ. (ಇಂಜಿನ್ ಸಂ:ಎಂ 06 ಡಿಬಿ 179369)ರಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 34:2002-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32,34 ಮತ್ತು 43 ರಂತೆ ಕ್ರಮ ಜರುಗಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪ ವಲಯ-ರವರು ದಿನಾಂಕ: 7.6.2003 ರಂದು ವರದಿಯನ್ನು ಸಲ್ಲಿಸಿ ವಾಹನ ಮತ್ತು ಮದ್ಯ ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ ಈ ಪ್ರಕರಣದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಸೀಸೆ ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ಸದರಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಇವರ ವರದಿಯಂತೆ 8.640 ಲೀ. ಮದ್ಯವನ್ನು (ಮಾದರಿ ಹೊರತುಪಡಿಸಿ) ದಿನಾಂಕ: 16.12.2003ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.01.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ದಿನಾಂಕ: 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಹತ್ತು (10) ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ

**ಆದೇಶ ಸಂಖ್ಯೆ: ಡಿಟಿಸಿಆರ್:586:02-03 ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ- ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪ ವಲಯ-ರವರ ಪ್ರ.ಮಾ.ವ. ಸಂಖ್ಯೆ: 34:2003-04 ದಿನಾಂಕ: 24.3.2003 ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಸ್ಕೂಟರ್ ಸಂಖ್ಯೆ: ಇರುವುದಿಲ್ಲ-ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.332

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ-ಇವರ ನ್ಯಾಯಾಲಯ**

| ಫಿರ್ಯಾದುದಾರರು | ವಿರುದ್ಧ | ಪ್ರತಿವಾದಿಗಳು: |
|---|---|---|
| ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪ ವಲಯ | 1. | ದಾಸಪ್ಪ, ಸಾರಾಯಿ ಗುತ್ತಿಗೆದಾರರು ಪಾಂಡವಪುರ ತಾ: (2002-03) |
| | 2. | ಶ್ರೀನಿವಾಸ್ ಬಿನ್ ವೆಂಕಟಪ್ಪ, ಗೋಸೇಗೌಡರ ಬೀದಿ, ಶ್ರೀರಂಗಪಟ್ಟಣ ತಾಲ್ಲೂಕು. |

ದಿನಾಂಕ: 30.6.2003 ರಂದು ಮಧ್ಯಾಹ್ನ 3.30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪವಲಯ-ರವರು ಪಾಂಡವಪುರ ತಾಲ್ಲೂಕಿನ ಪಾಂಡವಪುರ ಮೈಸೂರು ರಸ್ತೆಯ ವಿಶ್ವೇಶ್ವರಯ್ಯ ನಗರದ ಪಾಳು ಮಂಟಪದ ಹತ್ತಿರ ವಾಹನ ಗೂಡ್ಸ್ ವ್ಯಾನ್ ಸಂಖ್ಯೆ: ಕೆಎ-05: 391 ರಲ್ಲಿ ಅಕ್ರಮವಾಗಿ 400 ಲೀ. ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಸಾರಾಯಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 38/2002-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ), 43 ಮತ್ತು 43(ಎ)ರಂತೆ ಕ್ರಮ ಜರುಗಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ-ರವರು ದಿನಾಂಕ: 15.11.2003 ರಂದು ವರದಿಯನ್ನು ಸಲ್ಲಿಸಿ ಈ ಪ್ರಕರಣದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿಯನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ ಸದರಿ ಸಾರಾಯಿಯು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ ಹಾಗೂ ಸದರಿ ವಾಹನ ಮತ್ತು ಸಾರಾಯಿ ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ ಸದರಿ ವಾಹನ ಮತ್ತು ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಇವರ ವರದಿಯಂತೆ 400 ಲೀ. ಸಾರಾಯಿಯನ್ನು (ಮಾದರಿ ಸಾರಾಯಿಯನ್ನು ಹೊರತುಪಡಿಸಿ) ದಿನಾಂಕ: 16.12.2003 ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಆರೋಪಿಯಾದ ಶ್ರೀ ಶ್ರೀನಿವಾಸ್ ಬಿನ್ ವೆಂಕಟಪ್ಪ, ಗೋಸೇಗೌಡರ ಬೀದಿ, ಶ್ರೀರಂಗಪಟ್ಟಣ ತಾ: ಇವರಿಗೆ ವಾಹನ ಮತ್ತು ಸಾರಾಯಿಯನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ)ರ ಅಡಿಯಲ್ಲಿ ದಿನಾಂಕ: 16.12.2003 ರಂದು ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿ, ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿದ್ದಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.01.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ದಿನಾಂಕ: 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತು ಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಸಾರಾಯಿಯು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 400 ಲೀ. ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಏಳು (7) ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:686:02-03 ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ- ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪ ವಲಯ-ರವರ ಪ್ರ.ಮಾ.ವ. ಸಂಖ್ಯೆ:38/2003-04 ದಿನಾಂಕ:30.6.2003ರಲ್ಲಿ ವಶಪಡಿಸಿಕೊಂಡ ವಾಹನ ಗೂಡ್ಸ್ ಗಾಡಿ ಸಂಖ್ಯೆ: ಕೆಎ-05/391ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.333

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ-ಇವರ ನ್ಯಾಯಾಲಯ**

**ಫಿರ್ಯಾದುದಾರರು** **ವಿರುದ್ಧ** **ಪ್ರತಿವಾದಿಗಳು:**

ಅಬಕಾರಿ ನಿರೀಕ್ಷಕರು, 1. ಆರೋಪಿ ಇರುವುದಿಲ್ಲ.

ಉಪವಿಭಾಗ, ಮಂಡ್ಯ

ದಿನಾಂಕ: 18.5.2003 ರಂದು ರಾತ್ರಿ 8.00 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಉಪ ವಿಭಾಗ, ಮಂಡ್ಯ-ರವರು ಪಾಂಡವಪುರ ತಾಲ್ಲೂಕಿನ ಹರವು ಗ್ರಾಮದ ಅರಳೀ ಮರದ ಸರ್ಕಲ್ ಹತ್ತಿರ ವಾಹನ ಬಜಾಜ್ ಸ್ಕೂಟರ್ ಸಂಖ್ಯೆ: ಸಿಎನ್‌ಪಿ:7284 ರಲ್ಲಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 46/2002-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ), 43 ಮತ್ತು 43(ಎ)ರಂತೆ ಕ್ರಮ ಜರುಗಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು, ಪಾಂಡವಪುರ ಉಪ ವಲಯರವರು ದಿನಾಂಕ: 7.6.2003 ರಂದು ವರದಿಯನ್ನು ಸಲ್ಲಿಸಿ ಈ ಪ್ರಕರಣದಲ್ಲಿ ಮಾದರಿ ತೆಗೆದ ಸೀಸೆಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ದೃಢಪಟ್ಟಿರುತ್ತದೆ. ಆದ್ದರಿಂದ ವಾಹನ ಮತ್ತು ಮದ್ಯವನ್ನು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಇವರ ವರದಿಯಂತೆ 8.640 ಲೀ. ಮದ್ಯವನ್ನು (ಮಾದರಿ ಮದ್ಯವನ್ನು ಹೊರತುಪಡಿಸಿ) ದಿನಾಂಕ: 16.12.2003ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದ್ದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.1.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ದಿನಾಂಕ: 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಎಂಟು (8) ತಿಂಗಳು ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:643:02-03: ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ ಮಂಡ್ಯ-ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ನಿರೀಕ್ಷಕರು, ಉಪ ವಿಭಾಗ ಮಂಡ್ಯ-ರವರ ಪ್ರ.ಮಾ.ವ. ಸಂಖ್ಯೆ:46/2002-03 ದಿನಾಂಕ: 18.5.2003 ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಸ್ಕೂಟರ್ ಸಂಖ್ಯೆ: ಸಿಎನ್‌ವಿ-7284ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು,

ಪಿ.ಆರ್.334 ಮಂಡ್ಯ ಜಿಲ್ಲೆ, ಮಂಡ್ಯ.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ-ಇವರ ನ್ಯಾಯಾಲಯ**

**ಫಿರ್ಯಾದುದಾರರು** **ವಿರುದ್ಧ** **ಪ್ರತಿವಾದಿಗಳು:**

ಅಬಕಾರಿ ಉಪ ನಿರೀಕ್ಷಕರು, 1. ಟಿ. ವೆಂಕಟೇಶ್ ಬಿನ್ ತಿಮ್ಮೇಗೌಡ

ಶ್ರೀರಂಗಪಟ್ಟಣ ಉಪ ವಲಯ 2. ಆದಿಲ್ ಬಿನ್ ಅಬ್ದುಲ್ ವಾಜಿದ್

ಗೆಂಡೆಹೊಸಹಳ್ಳಿ ಗ್ರಾಮ, ಶ್ರೀರಂಗಪಟ್ಟಣ ತಾ:

ದಿನಾಂಕ: 11.11.2003 ರಂದು ರಾತ್ರಿ 10.30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ-ರವರು ಶ್ರೀರಂಗಪಟ್ಟಣ ತಾಲ್ಲೂಕಿನ ಕೋಡಿಯಾಲ ರಸ್ತೆ, ಆಲಗೂಡು ಗ್ರಾಮದ ಹತ್ತಿರ ವಾಹನ ಕವಾಸಕಿ ಬಜಾಜ್ ಸಂಖ್ಯೆ: ಕೆಎ-12/ ಇ-2976 (ಇಂಜಿನ್ ಸಂ:31 ಎಂ 95ಡಿ) ರಲ್ಲಿ ಅಕ್ರಮವಾಗಿ 12.960 ಲೀ. ನಕಲಿ ಮದ್ಯವನ್ನು ಹೊಂದಿ ಸಾಗಣಿಕೆ ಮಾಡುತ್ತಿದ್ದ ಬಗ್ಗೆ

ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 6/2003-04 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34, ಮತ್ತು 38(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ-ರವರು ದಿನಾಂಕ: 21.1.2004 ರಂದು ವರದಿಯನ್ನು ಸಲ್ಲಿಸಿ ವಾಹನ ಮತ್ತು ಮದ್ಯವನ್ನು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.1.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ದಿನಾಂಕ 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 12.960 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಮೂರು (3) ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:185:03-04 ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ- ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಶ್ರೀರಂಗಪಟ್ಟಣ ಉಪ ವಲಯ-ರವರ ಪ್ರ.ಮಾ.ವ. ಸಂಖ್ಯೆ:6/2003-04 ದಿನಾಂಕ: 11.11.2003 ರಲ್ಲಿ ವಶಪಡಿಸಿಕೊಂಡ ವಾಹನ ಕವಾಸಕಿ ಬಜಾಜ್ ಸಂಖ್ಯೆ: ಕೆಎ-12/ ಇ-2976ನ್ನು ಮತ್ತು ಮದ್ಯವನ್ನು (ಸ್ಯಾಂಪಲ್ ಬಾಟಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.335

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ-ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಅಬಕಾರಿ ನಿರೀಕ್ಷಕರು,<br>ಶ್ರೀರಂಗಪಟ್ಟಣ ವಲಯ | | 1. ಆರೋಪಿ ಇಲ್ಲ |

ದಿನಾಂಕ: 13.02.2003 ರಂದು ರಾತ್ರಿ 10.30 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ- ರವರು ಪಾಂಡವಪುರ ತಾಲ್ಲೂಕಿನ ನಾಗಮಂಗಲಕ್ಕೆ ಹೋಗುವ ದಾರಿಯಲ್ಲಿನ ಜಕ್ಕನಹಳ್ಳಿ ಸರ್ಕಲ್ ಬಳಿ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಎಂ.ಇ.ಎಂ-7945 ರಲ್ಲಿ 10.800 ಲೀ, ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 51/2002-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32 ಮತ್ತು 34 ರಂತೆ ಕ್ರಮ ಜರುಗಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ-ರವರು ದಿನಾಂಕ: 9.6.2003 ರಂದು ವರದಿಯನ್ನು ಸಲ್ಲಿಸಿ ವಾಹನ ಮತ್ತು ಮದ್ಯವನ್ನು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಇವರ ವರದಿಯಂತೆ ದಿನಾಂಕ: 16.12.2003 ರ ಆದೇಶದಲ್ಲಿ 10.800 ಲೀ ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ ಹಾಗೂ ವಾಹನ ಮಾಲೀಕತ್ವವನ್ನು ಕೋರಿ ದಿನಾಂಕ: 16.12.2003 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಮಂಡ್ಯ-ಇವರಿಗೆ ಪತ್ರ ಬರೆಯಲಾಗಿ ಈವರೆವಿಗೂ ಯಾವುದೇ ಮಾಹಿತಿ ನೀಡಿರುವುದಿಲ್ಲ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.1.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ದಿನಾಂಕ 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ

ಸೇರಿದೆಯೋ ಅಂತಹವರು ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 10.800 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಒಂದು ವರ್ಷ ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ

**ಆದೇಶ ಸಂಖ್ಯೆ: ಡಿಟಿಸಿಆರ್:516:02-03 ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ- ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ-ರವರ ಪ್ರ.ಮಾ.ವ. ಸಂಖ್ಯೆ:51/2002-03 ದಿನಾಂಕ: 13.02.2003 ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಎಂಇಎಂ-7945ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.336

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ-ಇವರ ನ್ಯಾಯಾಲಯ**

**ಫಿರ್ಯಾದುದಾರರು** **ವಿರುದ್ಧ** **ಪ್ರತಿವಾದಿಗಳು:**

ಅಬಕಾರಿ ನಿರೀಕ್ಷಕರು,
ಉಪ ವಿಭಾಗ, ಮಂಡ್ಯ

1. ಎಂ. ಗಂಗಾಧರ್ ಬಿನ್ ಸಿ.ಪಿ. ಮಹದೇವಯ್ಯ
ಕಾಲೇಜು ಎದುರು ಕೆ.ಆರ್.ಎಸ್. ಶ್ರೀರಂಗಪಟ್ಟಣ

ದಿನಾಂಕ: 11.04.2003 ರಂದು ಮಧ್ಯಾಹ್ನ 4.00 ಗಂಟೆಯಲ್ಲಿ ಅಬಕಾರಿ ನಿರೀಕ್ಷಕರು, ಉಪ ವಿಭಾಗ, ಮಂಡ್ಯ-ರವರು ಶ್ರೀರಂಗಪಟ್ಟಣ ತಾಲ್ಲೂಕಿನ ಬಸ್ತೀಪುರ ಗೇಟ್ ಬಳಿ ಬೆಳಗೊಳ ಹೋಬಳಿಯಲ್ಲಿ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ-09/ವಿ 8233 ರಲ್ಲಿ 15.300 ಲೀ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 39/2002-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34 ಮತ್ತು 38(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ-ರವರು ದಿನಾಂಕ: 9.6.2003 ರಂದು ವರದಿಯನ್ನು ಸಲ್ಲಿಸಿ ಈ ಪ್ರಕರಣದಲ್ಲಿ ಮಾದರಿ ತೆಗೆದ ಸೀಸೆಗಳನ್ನು ರಾಸಾಯನಿಕ ಪ್ರಯೋಗಾಲಯಕ್ಕೆ ಕಳುಹಿಸಿ ವರದಿ ಪಡೆಯಲಾಗಿ ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ ಹಾಗೂ ವಾಹನ ಮತ್ತು ಮದ್ಯವನ್ನು ತಮ್ಮದ್ದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಇವರ ವರದಿಯಂತೆ 15.300 ಲೀ. ಮದ್ಯವನ್ನು (ಮಾದರಿ ಹೊರತುಪಡಿಸಿ) ದಿನಾಂಕ: 18.12.2003ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದ್ದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.1.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು ದಿನಾಂಕ: 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 15.300 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಹತ್ತು (10) ತಿಂಗಳು ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಸಿ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:599:02-03 ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ ಮಂಡ್ಯ- ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ನಿರೀಕ್ಷಕರು ಉಪ ವಿಭಾಗ ಮಂಡ್ಯ- ರವರ ಪ್ರ.ಮಾ.ವ. ಸಂಖ್ಯೆ: 39/2002-03, ದಿನಾಂಕ: 11.4.2003 ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-09/ವಿ-8233-ನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.337

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ-ಇವರ ನ್ಯಾಯಾಲಯ**

| ಫಿರ್ಯಾದುದಾರರು | ವಿರುದ್ಧ | ಪ್ರತಿವಾದಿಗಳು: |
|---|---|---|
| ಅಬಕಾರಿ ನಿರೀಕ್ಷಕರು, | | 1. ರಾಮಕೃಷ್ಣ ಬಿನ್ ಚಿಕ್ಕಯ್ಯ (ಡ್ರೈವರ್) |
| ಶ್ರೀರಂಗಪಟ್ಟಣ ವಲಯ | | ಅಬ್ಲವಾಡಿ, ಕೊಪ್ಪ ಹೋಬಳಿ, ಮದ್ದೂರು ತಾ: |

ದಿನಾಂಕ: 20.5.2003 ರಂದು ಮಧ್ಯಾಹ್ನ 4.30 ಗಂಟೆಗೆ ಅಬಕಾರಿ ನಿರೀಕ್ಷಕರು ಶ್ರೀರಂಗಪಟ್ಟಣ ವಲಯ-ರವರು ಶ್ರೀರಂಗಪಟ್ಟಣ ಟೌನ್ ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಹಿಂಭಾಗದಲ್ಲಿರುವ ಬೆಂಗಳೂರು-ಮೈಸೂರು ಮುಖ್ಯ ರಸ್ತೆಯಲ್ಲಿ ಮೆಟಡೋರ್ (ಗೂಡ್ಸ್ ವ್ಯಾನ್) ಸಂಖ್ಯೆ: ಕೆಎ-03/6740 ರಲ್ಲಿ 734.400 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಬಗ್ಗೆ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 58/2002-03 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32,34 ಮತ್ತು 38(3) ರಂತೆ ಕ್ರಮ ಜರುಗಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಪಶ್ಚಿಮ)- ಇವರಿಗೆ ದಿನಾಂಕ: 26.8.2003 ರಂದು ಈ ಪ್ರಾಧಿಕಾರದಿಂದ ಬರೆಯಲಾಗಿ ಈವರೆವಿಗೂ ಯಾವುದೇ ಮಾಹಿತಿ ಬಂದಿರುವುದಿಲ್ಲ ಹಾಗೂ ಈ ಪ್ರಕರಣದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಕಳುಹಿಸಿ ವರದಿ ಪಡೆಯಲಾಗಿ ಸದರಿ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ವರದಿಯಿಂದ ದೃಢಪಟ್ಟಿರುತ್ತದೆ.

ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ-ರವರು ದಿನಾಂಕ: 21.1.2004 ರಂದು ವರದಿಯನ್ನು ಸಲ್ಲಿಸಿ ವಾಹನ ಮತ್ತು ಮದ್ಯ ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದ್ದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.01.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು ದಿನಾಂಕ: 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂತಹವರು ಪ್ರಕಟಣೆಯಾದ ಏಳು (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತು ಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ಮದ್ಯವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 734.400 ಲೀ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ. ಮೊಕದ್ದಮೆ ದಾಖಲಾಗಿ ಸುಮಾರು ಎಂಟು (8) ತಿಂಗಳು ಕಳೆದರೂ ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಎ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್:645:02-03 ದಿನಾಂಕ: 7ನೇ ಫೆಬ್ರವರಿ 2004**

ಎಸ್. ಅನಂತು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ ಮಂಡ್ಯ- ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯರವರ ಪ್ರ.ಮಾ.ವ. ಸಂಖ್ಯೆ:58:2002-03 ದಿನಾಂಕ: 20.5.2003 ರಲ್ಲಿ ವಶಪಡಿಸಿಕೊಂಡ ವಾಹನ ಮೆಟಡೋರ್ ಸಂಖ್ಯೆ: ಕೆಎ-03:6740-ನ್ನು ಮತ್ತು ಮದ್ಯವನ್ನು (ಸ್ಯಾಂಪಲ್ ಬಾಟಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43(ಸಿ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.338

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರಸಂ: ಕಾಅದಾ:ಕಾನಪ:ಸಿಆರ್:10/04 ದಿನಾಂಕ: 14ನೇ ಜನವರಿ 2004**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಶ್ರೀಮತಿ ಹುಲುಗಮ್ಮ
ದಿ: ನಾರಾಯಣಪ್ಪನವರ ಪತ್ನಿ ಮತ್ತಿತರೆ
ಇಬ್ಬರು ಹುಚ್ಚಂಗಿಪುರ, @ ಹೊಸದುರ್ಗ
ಜಗಳೂರು ತಾ: ದಾವಣಗೆರೆ ಜಿಲ್ಲೆ.

1. ಕರಿಯಪ್ಪ ಬಿನ್ ಲಕ್ಕಯ್ಯ
ಕಲ್ಲಳ್ಳಿ ಹುಡ್ಕೋ 'ಡಿ' ಬ್ಲಾಕ್, 4ನೇ ಮುಖ್ಯರಸ್ತೆ
ಎಲ್ಐಜಿನಂ-273, ವಿನೋಬನಗರ, ಶಿವಮೊಗ್ಗ
2. ಆರ್. ಶಿವಕುಮಾರ್ ಬಿನ್ ಗದ್ದೆರಾಮಣ್ಣ
ಲಕ್ಕಪ್ಪ ಲೇಔಟ್, ಕಾಶಿಪುರ, ವಿನೋಬನಗರ, ಶಿವಮೊಗ್ಗ.

**ಪ್ರಕಟಣೆ**

ಶ್ರೀ:ಶ್ರೀಮತಿ 1) ಹುಲುಗಮ್ಮ 2) ಮಂಜುನಾಥ 3) ಶಿವಕುಮಾರ ಇವರುಗಳಾದ ತಾವು ಮೃತ ನಾರಾಯಣಪ್ಪ ಇವರ ಪತ್ನಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ನಾರಾಯಣಪ್ಪ ರವರು ಒಂದನೇ ಪ್ರತಿವಾದಿಗಳಾದ ಕರಿಯಪ್ಪ ಇವರ ಬಿಲ್ಡಿಂಗ್ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ. ಹೆಚ್. ಹಿರೇಗೌಡರ್**
ಪಿ.ಆರ್.339 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.**
**ಪ್ರಸಂ:ಕಾಅದಾ:ಕಾನಪ:ಸಿಆರ್:7/04 ದಿನಾಂಕ: 14ನೇ ಜನವರಿ 2004**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಎಂ. ಓಬ್ಯಾನಾಯ್ಕ ಬಿನ್ ಮೆಗ್ಯಾನಾಯ್ಕ
ಮತ್ತಿತರೆ ಇಬ್ಬರು ರಾಜಗೊಂಡನಹಳ್ಳಿ ತಾಂಡ
ಚನ್ನಗಿರಿ ತಾಲ್ಲೂಕ್, ದಾವಣಗೆರೆ ಜಿಲ್ಲೆ.

1. ಮಹಮದ್ ಸಾಬ್ ಬಿನ್ ಲೇಟ್ ಹುಸೇನ್‌ಸಾಬ್
ಹೊನ್ನೆಬಾಗಿ, ಚನ್ನಗಿರಿ ತಾಲ್ಲೂಕ್, ದಾವಣಗೆರೆ ಜಿಲ್ಲೆ.
2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.,
ಅಕ್ಕಮಹಾದೇವಿ ರಸ್ತೆ, ದಾವಣಗೆರೆ.

**ಪ್ರಕಟಣೆ**

1) ಶ್ರೀ ಎಂ .ಓಬ್ಯಾನಾಯ್ಕ 2) ಶ್ರೀಮತಿ ಯಲ್ಲಿಬಾಯಿ 3) ರುದ್ರನಾಯ್ಕ ಇವರುಗಳಾದ ತಾವು ಮೃತ ಮನೋಹರ ಇವರ ತಂದೆ-ತಾಯಿ ಮತ್ತು ಸಹೋದರ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಮನೋಹರ ರವರು ಒಂದನೇ ಪ್ರತಿವಾದಿಗಳಾದ ಮಹಮದ್‌ಸಾಬ್ ಇವರ ಟ್ರ್ಯಾಕ್ಟರ್ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ. ಹೆಚ್. ಹಿರೇಗೌಡರ್**
ಪಿ.ಆರ್.340 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.**
**ಪ್ರಸಂ:ಕಾಅದಾ:ಕಾನಪ:ಸಿಆರ್:19/04 ದಿನಾಂಕ: 12ನೇ ಫೆಬ್ರವರಿ 2004**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1) ವಿ. ರುದ್ರಪ್ಪ 50 ವರ್ಷ
2) ಜಾನಕಮ್ಮ 45 ವರ್ಷ ನಂ.7, 62/1,
ಚಲವಾದಿಕೇರಿ, ದಾವಣಗೆರೆ

1. ಶ್ರೀಫಜರುಲ್ ರೆಹಮಾನ್ ಬಿನ್ ಅಬ್ದುಲ್ ರಹೂಫ್
ನಂ.29, ಬಂದರ್ ರಸ್ತೆ, ಭಟ್ಕಳ, ಪ್ರತಿನಿಧಿ:- ಜನರಲ್ ಪವರ್ ಆಫ್ ಅಟಾರ್ನಿ ಹೋಲ್ಡರ್, ಶ್ರೀ ಟಿ. ತಿಪ್ಪೇಸ್ವಾಮಿ ಬಿನ್ ತಿಮ್ಮಪ್ಪ, ಕರೆಕಲ್ಲು ದಿಬ್ಬ ಹೊಳಲ್ಕೆರೆ ತಾ:
ಚಿತ್ರದುರ್ಗ ಜಿಲ್ಲೆ.
2. ಬ್ರ್ಯಾಂಚ್ ಮ್ಯಾನೇಜರ್,
ಅರ್ಬನ್ ಬ್ಯಾಂಕ್ ಬಿಲ್ಡಿಂಗ್ ಮುಖ್ಯರಸ್ತೆ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಎನ್.ಹೆಚ್-17,
ಭಟ್ಕಳ (ಉ.ಕ)

**ಕಬ್ಬನ್‌ಪಾರ್ಕ್ ಪೊಲೀಸ್ ಠಾಣೆಯ ಸೀಮಿಸ್ ನಂ. 1189/03 ರ ಅಡಿಯಲ್ಲಿ ಪಿ.ಎಫ್.ನಂ. 92/03 ರಲ್ಲಿ ಅಮಾನತ್ತು ಪಡಿಸಿರುವ ವಸ್ತುಗಳ ವಿವರಗಳು ಈ ಕೆಳಕಂಡಂತೆ ಇರುತ್ತೆ**

| ಕ್ರ.ಸಂ. | ಸಿಮೀಸ್ ನಂ. | ಪಿ.ಎಫ್.ನಂ. | ಮಾಲುಗಳ ವಿವರಗಳು |
|---|---|---|---|
| 1 | 1189/03 | 92/03 | 1 ರಿಲೇಯನ್ಸ್ ಎಲ್.ಜಿ.ಮೊಬೈಲ್ ದೂರವಾಣಿಗಳು ಎರಡು ಮತ್ತು ಒಂದು (ರಿಲೇಯನ್ಸ್) ನೋಕಿಯಾ ಮೊಬೈಲ್ ದೂರವಾಣಿ ಒಟ್ಟು ಮೂರು ಮೊಬೈಲ್ ದೂರವಾಣಿಗಳು.<br>2 ಸಿಮೇನ್ಸ್ ಒಂದು ದೊಡ್ಡ ಮೊಬೈಲ್ ಮತ್ತು ಒಂದು ಚಿಕ್ಕ ಮೊಬೈಲ್ ಒಟ್ಟು 2 ಮೊಬೈಲ್ ದೂರವಾಣಿಗಳು.<br>3 ಮೋಟಾರೋಲ ಒಂದು ಮೊಬೈಲ್ ದೂರವಾಣಿ<br>4 ಅಲ್ ಕಾಟೆಲ್ ಒಂದು ಮೊಬೈಲ್ ದೂರವಾಣಿ<br>5 ಸಾನೀಯೋ ರೆಕಾರ್ಡರ್ ಒಂದು ಸಂಖ್ಯೆ (ಆರ್-6 ಹೆಚ್.ಪಿ. 7" ಎ.ಎ.ಸೈಜ್)<br>6 ಕೆನನ್ ಕ್ಯಾಮರಾ ಒಂದು ಸಂಖ್ಯೆ (ಎಸ್.ಎಂ. III ಮೇಡ್ ಇನ್ ಜಪಾನ್)<br>7 ಒಂದು ಚಿನ್ನದ ಬ್ರೇಸ್ ಲೇಟ್ (ಸುಮಾರು 16 ಗ್ರಾಂ)<br>8 ಒಂದು ಚಿನ್ನದ ಕಿವಿಯ ಓಲೆ (ಸುಮಾರು 2 ಗ್ರಾಂ)<br>9 ಒಂದು ದಿನಾಂಕವಿರುವಂತಹ SECMA ಲೆದರ್ ಪಟ್ಟಿ ಇರುವ ಕೈ ಗಡಿಯಾರ<br>10 ಒಂದು SONATA ಲೆದರ್ ಪಟ್ಟಿ ಇರುವ ಕೈ ಗಡಿಯಾರ<br>11 ಒಂದು SEIKO ಮೆಟಲ್ ಪಟ್ಟಿ ಇರುವ ಮಹಿಳಾ ಕೈ ಗಡಿಯಾರ<br>12 ಒಂದು QAAX ಮೆಟಲ್ ಪಟ್ಟಿ ಇರುವ ಮಹಿಳಾ ಕೈ ಗಡಿಯಾರ<br>13 ಸೋಫಾ ಬಟ್ಟೆಗಳ ಹಾಗೂ ಟರ್ಪೆಂಟೈನ್ ಆಯಿಲ್ ಕ್ಯಾನ್ ಮತ್ತು ಸ್ಪಾಂಜ್ ರೋಲ್<br>14 25 ಹೊಸ ಕಾಟನ್ ಸೀರೆಗಳು<br>15 ಹಳೇ ಬಟ್ಟೆಗಳಿರುವ 6 ಹಳೇ ಸೂಟ್ ಕೇಸ್ ಮತ್ತು 2 ಹಳೇ ಲೇದರ್ ಸೂಟ್ ಕೇಸ್ ಹಾಗೂ 2 ಹಳೇ ಬ್ಯಾಗುಗಳು<br>16 ROLAND ಎಂಬ ಹೆಸರಿನ ಕಂಪ್ಯೂಟರ್ ಡ್ರಮ್ಸ್ ಒಂದು |

ಪಿ.ಆರ್. 343 8ನೇ ಎ.ಸಿ.ಸಿ.ಎಂ. ನ್ಯಾಯಾಲಯ, ಬೆಂಗಳೂರು ನಗರ.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಸಾಲಬನ್ನಿ ಗ್ರಾಮದಲ್ಲಿ ಅಲಂಕಾರಿಕ ಶಿಲೆಗಾಗಿ ಶ್ರೀ ಬಿ. ಗೋಪಿನಾಥ್ ರವರಿಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 355ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :** 1 ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು, 355:2003-04:6086 ದಿನಾಂಕ: 11.11.2003.

2\. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ:ಕಗಗು 355:2003-04:4618 ದಿನಾಂಕ: 26.7.2003.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಸಾಲಬನ್ನಿ ಗ್ರಾಮದ ಸರ್ವೆ ನಂ. 75 ರಲ್ಲಿ ಶ್ರೀ ಬಿ. ಗೋಪಿನಾಥ್ ರವರಿಗೆ 1.36 ಎಕರೆಗೆ ದಿನಾಂಕ: 29.7.2000 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಪತ್ರಗಳಡಿಯಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.39,350.00 ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:355:2003-04/18922 ದಿನಾಂಕ: 1ನೇ ಮಾರ್ಚ್ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಸಾಲಬನ್ನಿ

ಗ್ರಾಮದ ಸರ್ವೆ ನಂ. 75 ರಲ್ಲಿ 1.36 ಎಕರೆಗೆ ಅಲಂಕಾರಿಕ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 355 ನ್ನು ತಕ್ಷಣದಿಂದ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 344 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ನಲ್ಲಹಳ್ಳಿ ಗ್ರಾಮದಲ್ಲಿ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ಶ್ರೀಮತಿ ಇಂದಿರಮ್ಮ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 303ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :** 1 ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು, 303:2003-04:5890 ದಿನಾಂಕ: 27.10.2003.

2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ:ಕಗಗು 303:2003-04:10428 ದಿನಾಂಕ: 23.12.2003.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ನಲ್ಲಹಳ್ಳಿ ಗ್ರಾಮದ ಸರ್ವೆ ನಂ. 283:5 ರಲ್ಲಿ ಶ್ರೀಮತಿ ಇಂದಿರಮ್ಮ ರವರಿಗೆ 2-00 ಎಕರೆಗೆ ದಿನಾಂಕ: 10.3.2000 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ 1 ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನೆ ಪತ್ರಗಳನ್ನು ನೀಡಿ 2002ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.54251-00 ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರ 2 ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

### ಆದೇಶ

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:303:2003-04/18472 ದಿನಾಂಕ: 21ನೇ ಫೆಬ್ರವರಿ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ ನಲ್ಲಹಳ್ಳಿ ಗ್ರಾಮದ ಸರ್ವೆ ನಂ. 283:5ರಲ್ಲಿ 2-00 ಎಕರೆಗೆ ಮಲ್ಟಿ ಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 303ನ್ನು ತಕ್ಷಣದಿಂದ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 345 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

## ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಸವಣೂರ

### ಅಧಿಸೂಚನೆ

**ನಂ:ತಾಸಕಅ:ಸಕಇ:ವಿಘಯೋ:ಕುಂಕೊ:ಕಆ:ಸಿಆರ್:2003-04 ದಿನಾಂಕ: 12ನೇ ಫೆಬ್ರವರಿ 2004**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ:56: ಯೋಮಸ:02 (1) ದಿನಾಂಕ: 18.7.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ, 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ, ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರಿ |
|---|---|
| ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3 (ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1. ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್‌ನ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1. ಕಛೇರಿ ಅಧೀಕ್ಷಕರು : 1 ಹುದ್ದೆ ಹುದ್ದೆ ಖಾಲಿ ಇದೆ.
2. ಪ್ರಥಮ ದರ್ಜೆ ಸಹಾಯಕರು : 1 ಹುದ್ದೆ ಶ್ರೀ ಎಂ. ಎಸ್. ಕಮ್ಮಾರ
3. ದ್ವಿತೀಯ ದರ್ಜೆ ಸಹಾಯಕರು : 1 ಹುದ್ದೆ ಶ್ರೀ ಸಿ. ರಾಮಾಂಜನೇಯ
4. ಬೆರಳಚ್ಚುಗಾರರು : 1 ಹುದ್ದೆ ಹುದ್ದೆ ಖಾಲಿ ಇದೆ.
5. ಗ್ರೂಪ್ 'ಡಿ' ನೌಕರರು : 1 ಹುದ್ದೆ ಹುದ್ದೆ ಖಾಲಿ ಇದೆ.

**ಸೂಚನೆ:** ನಂತರ ಇಲ್ಲಿ ನಿಮ್ಮ ಅಧೀನದಡಿಯಲ್ಲಿ ಬರುವ ಎಲ್ಲಾ ಸಂಸ್ಥೆಗಳ ಹೆಸರು ಮತ್ತು ವಿವರಗಳನ್ನು ನೀಡತಕ್ಕದ್ದು.

1. ಸರಕಾರಿ ಸಾರ್ವಜನಿಕ ಗಂಡುಮಕ್ಕಳ ವಿದ್ಯಾರ್ಥಿ ನಿಲಯ, ಸವಣೂರ
2. ಸರಕಾರಿ ಸಾರ್ವಜನಿಕ ಗಂಡುಮಕ್ಕಳ ವಿದ್ಯಾರ್ಥಿ ನಿಲಯ ಹುರಳಿಕುಪ್ಪಿ
3. ಸರಕಾರಿ ಸಾರ್ವಜನಿಕ ಗಂಡುಮಕ್ಕಳ ವಿದ್ಯಾರ್ಥಿ ನಿಲಯ, ಡೊಂಬರಮತ್ತೂರ
4. ಮಹಿಳಾ ಕಲ್ಯಾಣ ಕೇಂದ್ರ, ಸವಣೂರ

ಸಮಾಜ ಕಲ್ಯಾಣ ಇಲಾಖೆಯ ಸಂಬಂಧಿಸಿದಂತೆ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪ.ಜಾತಿ:ಪ.ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಹೊಲಿಗೆ ಯಂತ್ರಗಳ ಸರಬರಾಜು
2. ಕಾನೂನು ಪದವೀಧರರಿಗೆ ಧನ ಸಹಾಯ
3. ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು.
4. ಕಟ್ಟಡಗಳ ನಿರ್ವಹಣೆ
5. ರಾಜ್ಯ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯವೇತನ.
6. ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ
7. ಮೆಟ್ರಿಕ್‌ಪೂರ್ವ ವಿದ್ಯಾರ್ಥಿವೇತನ
8. ಪ್ರತಿಭಾ ವಿದ್ಯಾರ್ಥಿವೇತನ
9. ಮೆಟ್ರಿಕ್‌ಪೂರ್ವ ವಿದ್ಯಾರ್ಥಿನಿಲಯಗಳು
10. ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ
11. ಪ. ವರ್ಗದ ಮೆಟ್ರಿಕ್‌ನಂತರದ ವಿದ್ಯಾರ್ಥಿವೇತನ (ಸಿ.ಎಸ್.ಎಸ್)
12. ಮಹಿಳೆಯರಿಗೆ ಟಿ.ಸಿ.ಹೆಚ್. ತರಬೇತಿ
13. ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವ ಮಕ್ಕಳಿಗೆ ಮೆಟ್ರಿಕ್‌ಪೂರ್ವ ವಿದ್ಯಾರ್ಥಿವೇತನ
14. 1 ರಿಂದ 5ನೇ ತರಗತಿಯ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ
15. ಪ.ಜಾತಿಯವರ ಮನೆಗಳಿಗೆ ವಿದ್ಯುತ್ ಪೂರೈಕೆ
16. ಅಸ್ಪೃಶ್ಯತಾ ನಿವಾರಣೆ
17. ದೌರ್ಜನ್ಯಕ್ಕೆ ಒಳಪಟ್ಟ ಪ.ಜಾತಿಯವರಿಗೆ ಪರಿಹಾರ
18. ಜಾತಿ ಪರಿಶೀಲನೆ
19. ಅಂಬೇಡ್ಕರ್ ವಸತಿ ಯೋಜನೆ
20. ಆಶ್ರಯ ವಸತಿ ಯೋಜನೆ

**ಸೂಚನೆ:** ಮೇಲ್ಕಂಡ ಕಾರ್ಯಕ್ರಮಗಳಲ್ಲಿ ತಾಲ್ಲೂಕು ಮಟ್ಟದ ಇನ್ನಾವುದಾದರೂ ಬೇರೆ ಯೋಜನೆಗಳನ್ನು ಸೇರಿಸಬೇಕಾಗಿದ್ದಲ್ಲಿ ಆ ಬಗ್ಗೆ ಪರಿಶೀಲಿಸಿ ಪ್ರಕಟಿಸುವುದು ಮತ್ತು ಸಂಬಂಧಪಡದೇ ಇರುವ ಯೋಜನೆಗಳನ್ನು ಕೈಬಿಡುವುದು.

**2. ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ, ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾ ಅಧಿಕಾರಿಗಳಿಗೆ ಇರುವುದು.

**ಅಧಿಕಾರಿಗಳ ಕರ್ತವ್ಯಗಳು:**

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು:** ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳ ಬಗ್ಗೆ ಇಲ್ಲಿ ಅಂಶವಾರು ಮಾಹಿತಿ ನೀಡುವುದು. ಜಾಬ್‌ಚಾರ್ಟ್ ಪ್ರತಿ ಲಗತ್ತಿಸಿದೆ.

**ಸೂಚನೆ:** ಜಾಬ್ ಚಾರ್ಟಿನಲ್ಲಿ ನೀಡಿರುವ ಕರ್ತವ್ಯಗಳಲ್ಲದೇ, ಬೇರೆ ಮಾಹಿತಿಗಳಿದ್ದಲ್ಲಿ, ಇವುಗಳನ್ನು ಸೇರಿಸುವುದು ಹಾಗೂ ಸಂಬಂಧಪಡದ ಮಾಹಿತಿಗಳನ್ನು ಕೈಬಿಡುವುದು.

**3. ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯ್ದ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರುಸಹಿ ಮಾಡಿಸಿದ ನಂತರ, ಸದರಿ ಪತ್ರಗಳನ್ನು ಹೊಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ, ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವರು.

**3. ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೊಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು
3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕ ಮೇಜು ತಪಾಸಣೆ ಕಾರ್ಯ.
4. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸರ್ಕಾರವು: ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**4. ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು.**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ನೀಡುವುದು.
2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ, ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ, ಜಂಟಿ ನಿರ್ದೇಶಕರು (ವಿ.ಘ.ಯೋ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

**ಸೂಚನೆ:** ಮೇಲೆ ನೀಡಿರುವ ಮಾಹಿತಿಗಳು ಕೇವಲ ಮಾದರಿಗಾಗಿ ನೀಡಿದ್ದು, ಇದರಲ್ಲಿ ಇನ್ನೂ ಹೆಚ್ಚಿನ ಮಾಹಿತಿ ನೀಡಬೇಕಾಗಿದ್ದ ಪಕ್ಷದಲ್ಲಿ ಅದನ್ನು ಸೇರಿಸಿ ಹೊರಡಿಸುವುದು ಮತ್ತು ಸಂಬಂಧಪಡದ ಮಾಹಿತಿಗಳನ್ನು ಕೈಬಿಡುವುದು.

ಪಿ.ಆರ್.346 ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು, ಸವಣೂರ.

## ಕೆ.ಜಿ.ಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ನಗರ

## ಸುತ್ತೋಲೆ

**ದಿನಾಂಕ: 5ನೇ ಜನವರಿ 2004**

ಈ ಮೂಲಕ ಬೆಂಗಳೂರು ನಗರದ ಎಲ್ಲಾ ಪೊಲೀಸ್ ಠಾಣೆಯ ಠಾಣಾಧಿಕಾರಿಗಳ ಗಮನಕ್ಕೆ ತರಬಯಸುವುದೇನೆಂದರೆ ಕೆ.ಜಿ.ಹಳ್ಳಿ ಪೊಲೀಸ್ ಠಾಣೆಯಲ್ಲಿ ಬೇರೆ ಬೇರೆ ದಿನಾಂಕಗಳಲ್ಲಿ ಠಾಣಾ ಸರಹದ್ದಿನಲ್ಲಿ ವಾರಸುದಾರರಿಲ್ಲದೆ ನಿಂತಿದ್ದ ದ್ವಿಚಕ್ರ ವಾಹನಗಳನ್ನು ಠಾಣಾ ಸಿಮಿಸ್ ನಂ ನಲ್ಲಿ ವಶಪಡಿಸಿಕೊಂಡಿರುತ್ತದೆ. ತಮ್ಮ ಪೊಲೀಸ್ ಠಾಣೆಯ ಯಾವುದಾದರು ಕೇಸಿನಲ್ಲಿ ಈ ಕೆಳಕಂಡ ವಾಹನಗಳು ಬೇಕಾಗಿದ್ದಲ್ಲಿ ಮಾಹಿತಿಯನ್ನು ನೀಡಲು ಈ ಮೂಲಕ ಕೋರಲಾಗಿದೆ.

| ಕ್ರ.ಸಂ. | ವಾಹನದ ಹೆಸರು | ಸಿಮೀಸ್ ನಂಬರ್ | ಪಿ.ಎಸ್.ನಂ. | ಇಂಜಿನ್ ನಂಬರ್ | ಚಾರ್ಸಿ ನಂಬರ್ |
|---|---|---|---|---|---|
| 1 | ಹಳೆಯ ಕವಾಸಕಿ ಬಜಾಜ್ ಕೆಎ-04-ಆರ್-9047 | 1916/03 | ಪಿಎಫ್‌ನಂ. 229/03 | DBM-96-L-06841 | DBF-96-L-06381 |
| 2 | ಹಳೆಯ ಯಮಹ ಕೆಎ-02-ಎಲ್-9786 | 1916/03 | ಪಿಎಫ್‌ನಂ. 229/03 | ILI-292400 | ILI-292400 |
| 3 | ಒಂದು ಹಳೆಯ ಹೀರೋ ಪೂಕ್ ಕೆಎ-05-ಆರ್-5190 | 1916/03 | ಪಿಎಫ್‌ನಂ. 229/03 | EB-373787 | MD-395-KIBRSC-376748 |

| ಕ್ರ.ಸಂ. | ವಾಹನದ ಹೆಸರು | ಸಿಮೀಸ್ ನಂಬರ್ | ಪಿ.ಎಸ್.ನಂ. | ಇಂಜಿನ್ ನಂಬರ್ | ಚಾರ್ಸಿ ನಂಬರ್ |
|---|---|---|---|---|---|
| 4 | ಹಳೇ ಲೂನಾ ಸೂಪರ್ ಮೊಪೇಡ್ ಕೆಎ-02-ಕ್ಯೂ-9505 | ಪಿಎಫ್‌ನಂ. 1823/03 | ಪಿಎಫ್‌ನಂ. 217/03 | 95 K-13066360 | 95-K-13075448 |
| 5 | ಒಂದು ಇಂಡ್ ಸುಜುಕಿ ಎ.ಐ.ಎಕ್ಸ್ 1130 | 1823/03 | ಪಿ.ಎಫ್. ನಂ.217/03 | 3502-MQ-005318 | BE-11-A-111637 |

ಪಿ.ಆರ್.347 ಪೊಲೀಸ್ ಸಬ್ ಇನ್‌ಸ್ಪೆಕ್ಟರ್ (ಕಾಸು) ಕಾಡುಗೊಂಡನಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು-45

**ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಹೆಚ್ಚುವರಿ ಜೆಎಂಎಫ್‌ಸಿ ನ್ಯಾಯಾಲಯ, ಸಾಗರ**

**ಸಿ.ಮಿಸ್.ನಂ: 167-2003**

**ಪಿ.ಆರ್.ನಂ:36/04**

**ಫಿರ್ಯಾದಿದಾರರು:** **ವಿರುದ್ಧ** **ಎದುರುದಾರರು:**

ಸಾಗರ ಗ್ರಾಮಾಂತರ ಠಾಣೆ ಇಲ್ಲ

**ಸಾರ್ವಜನಿಕ ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಕೆಳಗೆ ಕಾಣಿಸಿದ ಒಂದು ಹಸಿರು ಬಣ್ಣದ ಕೆಎ- 15 ಹೆಚ್-2646 ನಂಬರ್ ಇರುವ ಎಕ್ಸೆಲ್ ಹೆವಿಡ್ಯೂಟಿ ಮೊಪೆಡ್ ಛಾಸಿ ನಂ: ಪಿ. 3010 ಎಫ್ 349506, ಇಂಜಿನ್ ನಂ: ಪಿಎ-1010 ಎಂ-344758 ವಾಹನವನ್ನು ಸಾಗರ ಗ್ರಾಮಾಂತರ ಪೊಲೀಸರು ಪಿ.ಎಫ್. ಸಂಖ್ಯೆ: 200-2001 ದಿನಾಂಕ: 14.12.2001 ರಡಿಯಲ್ಲಿ ವಶಪಡಿಸಿಕೊಂಡು ಪ್ರಕರಣ ದಾಖಲು ಮಾಡಿದ್ದು ಸದರಿ ವಾಹನದ ಮಾಲೀಕರು ಯಾರು ಎಂದು ಈವರೆಗೂ ಪತ್ತೆಯಾಗಿರುವುದಿಲ್ಲ. ಆದ್ದರಿಂದ ಈ ಪ್ರಕಟಣೆ ಹೊರಡಿಸಿದ ದಿನಾಂಕದಿಂದ 6 ತಿಂಗಳ ಒಳಗಾಗಿ ಸದರಿ ವಾಹನದ ವಾರಸುದಾರರಾಗಲಿ ಹಕ್ಕುದಾರರಾಗಲಿ ಇದ್ದಲ್ಲಿ ಸದರಿ ವಾಹನವನ್ನು ತಮ್ಮದೆಂದು ಗುರುತಿಸುವ ಸಲುವಾಗಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಬಹುದು. ತಪ್ಪಿದಲ್ಲಿ ಸದರಿ ವಾಹನದ ವಾರಸುದಾರರು ಯಾರು ಇಲ್ಲ ಎಂದು ತಿಳಿದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಅನುಸೂಚಿ**

| ಕ್ರಮಸಂಖ್ಯೆ | ಸ್ವೊತ್ತಿನ ವಿವರ | ಪ್ರಕರಣದ ನಂಬರ್ ಪಿ.ಆರ್. ನಂಬರ್ ಪಿ.ಎಫ್. ನಂಬರ್ | ವಶಪಡಿಸಿಕೊಂಡ ದಿನಾಂಕ |
|---|---|---|---|
| 1. | ಒಂದು ಹಸಿರು ಬಣ್ಣದ ಕೆಎ-15 ಹೆಚ್-2646 ನಂಬರ್ ಇರುವ ಎಕ್ಸೆಲ್ ಹೆವಿಡ್ಯೂಟಿ ಮೊಪೆಡ್ ಛಾಸಿ ನಂ: ಪಿ-3010 ಎಫ್ 349506 ಇಂಜಿನ್ ನಂ: ಪಿ-1010 ಎಂ 344758 | ಸಿ.ಮಿಸ್. 167-2003<br>ಪಿ.ಎಫ್. 200-2001<br>ಪಿ.ಆರ್. 36/04 | 14.12.2001 |

ಪಿ.ಆರ್.348 ಹೆಚ್ಚುವರಿ ಸಿವಿಲ್ ಜಡ್ಜ್ (ಕಿ.ವಿ) ಮತ್ತು ಹೆಚ್ಚುವರಿ ಜೆಎಂಎಫ್‌ಸಿ, ಸಾಗರ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ-ಉಪ-ವಿಭಾಗ, ಮಧುಗಿರಿ, ತುಮಕೂರು ಜಿಲ್ಲೆ ಇವರ ನಡವಳಿಕೆಗಳು**

**ವಿಷಯ :** ಶ್ರೀ ಎಸ್. ಹನುಮಂತರಾಯ ಬಿನ್ ನಾಗಾಭೋವಿ ಮಾಜಿ ಸಹಾಯಕ ಕಾರ್ಯದರ್ಶಿ ವ್ಯವಸಾಯ ಸೇವಾ ಸಹಕಾರ ಸಂಘ ಬುಕ್ಕಾಪಟ್ಟಣ ಶಿರಾ ತಾಲ್ಲೋಕು (ಸ್ವಂತ ಊರು ರಾಮಲಿಂಗಾಪುರ) ಇವರ ಮತ್ತು ಅವರ ಕಾನೂನು ವಾರ ಸುದಾರರ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ದಿನಾಂಕ: 11.8.2003 ರಂದು ನಡೆದ ಬಹಿರಂಗ ಹರಾಜು ಮಾರಾಟದಲ್ಲಿ ಖರೀದಿಸಿರುವ ಸ್ಥಿರ ಸ್ವತ್ತುಗಳನ್ನು ವ್ಯವಸಾಯ ಸೇವಾ ಸಹಕಾರ ಸಂಘ 'ನಿ' ಬುಕ್ಕಾಪಟ್ಟಣ ಶಿರಾ ತಾಲ್ಲೂಕು ಇದರ ಹೆಸರಿಗೆ ವರ್ಗಾಣೆ ಮಾಡುವ ಬಗ್ಗೆ.

**ಉಲ್ಲೇಖ :**
1. ಮಾರಾಟಾಧಿಕಾರಿ ನಿಯಮ 441 ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ. ಮಧುಗಿರಿ ಶಾಖೆ ಇವರ ಪ್ರಸ್ತಾವನೆ ಪತ್ರದ ನಂ. ಮಾ.ಅ.ನಿ.441, ಟಿ.ಡಿ.ಸಿ.ಸಿ.ಜಿ ಮಾ.ಸ್ಥಿ:36:2003-04 ದಿನಾಂಕ: 20.9.2003
2. ಈ ಕಛೇರಿಯ ಈ ಕೆಳಕಂಡ ಸಮಸಂಖ್ಯೆ ಪತ್ರದ ದಿನಾಂಕ: 23.10.2003 ಮತ್ತು 22.12.2003
3. ಕಾರ್ಯದರ್ಶಿ ವ್ಯವಸಾಯ ಸೇವಾ ಸಹಕಾರ ಸಂಘ ನಿ ಬುಕ್ಕಾಪಟ್ಟಣ ಶಿರಾ ತಾಲ್ಲೂಕು ಇವರ ವರದಿ ಪತ್ರದ ದಿನಾಂಕ: 31.12.2003.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ ಶಿರಾ ತಾಲ್ಲೂಕು, ಬುಕ್ಕಾಪಟ್ಟಣ ಗ್ರಾಮದಲ್ಲಿರುವ ವ್ಯವಸಾಯ ಸೇವಾ ಸಹಕಾರ ಸಂಘವು ಕರ್ನಾಟಕ ಸಹಕಾರ ಕಾಯಿದೆ 1959 ನಿಯಮ 1960ರ ಅನ್ವಯ ನೋಂದಾವಣೆಯಾಗಿದ್ದು ನೊಂದಣಿಗೊಂಡ ಉಪನಿಯಮಗಳ ಅನ್ವಯ ಕಾರ್ಯನಿರ್ವಹಿಸುತ್ತದೆ. ಈ ಸಹಕಾರ ಸಂಘದ ಸಹಾಯಕ ಕಾರ್ಯದರ್ಶಿಯಾಗಿದ್ದ ಎನ್. ಹನುಮಂತರಾಯ ಇವರು ಸಂಘದ ಹಣವನ್ನು 1986-87, 87-88 ಮತ್ತು 1988-89ನೇ ಸಾಲುಗಳಲ್ಲಿ ದುರುಪಯೋಗ ಮಾಡಿದ್ದು ಇವರ ಮೇಲೆ ಅದಿಭಾರ ಅರ್ಜಿಸಂಖ್ಯೆ 5:90-91ರ

ರೀತ್ಯಾ ದಾವೆಯನ್ನು ಹೂಡಿ ವಿಚಾರಣೆ ನಡೆಸಿ ದಿನಾಂಕ: 13.2.2002 ರಂದು ರೂ. 347014-06 ಮತ್ತು ಶೇ.18ರ ಬಡ್ಡಿ ಸೇರಿಸಲು ವಸೂಲಾತಿ ಆದೇಶ ನೀಡಿರುತ್ತದೆ. ನಂತರ ಅದು ಅಮಲ್ಜಾರಿ ನಂ. 118:2002-03, ದಿನಾಂಕ: 23.12.02ರ ಪ್ರಕಾರ ಸಂಬಂಧಪಟ್ಟ ಪ್ರಾಧಿಕಾರವಾದ ಈ ಕಛೇರಿಯಲ್ಲಿಯೇ ದಾಖಲು ಮಾಡಿ ರೂ. 1196802-00ಕ್ಕೆ ಅಮಲ್ಜಾರಿ ಪಡೆಯಲಾಗಿದೆ.

ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಬಾಕಿ ಹಣವು ಸಂಘಕ್ಕೆ ಜಮಾ ಆಗದೇ ಇದ್ದ ಕಾರಣದಿಂದ ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ನಂ.118:2002-03, ಅಮಲ್ಜಾರಿ ಅರ್ಜಿಯನ್ನು ಸಂಘಕ್ಕೆ ಆರ್ಥಿಕ ನೆರವು ನೀಡಿದ ಬ್ಯಾಂಕಿನಲ್ಲಿರುವ ಮಾರಾಟಾಧಿಕಾರಿಗಳು ನಿಯಮ 441, ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ ಮಧುಗಿರಿ ಶಾಖೆ ಇವರಿಗೆ ವಸೂಲಿ ಕ್ರಮ ಕೈಗೊಳ್ಳಲು ಈ ಕಡತವನ್ನು ವಹಿಸಲಾಗಿತ್ತು. ಮಾರಾಟಾಧಿಕಾರಿಯವರು ವಸೂಲಿ ಕ್ರಮದ ಅಡಿಯಲ್ಲಿ ಫಾರಂ ನಂ. 2ರ ನೋಟೀಸನ್ನು 6ರ ಫಾರಂನ್ನು ಜಾರಿ ಮಾಡಿಸಿರುತ್ತಾರೆ. ಇಲ್ಲಿ ಪ್ರತಿವಾದಿ ಎನ್. ಹನುಮಂತರಾಯ ಬೆಂಗಳೂರಿನಲ್ಲಿ ವಾಸವಿದ್ದು ಅವರ ಇರುವಿಕೆಯ ಸ್ಥಳ ಗೊತ್ತಿಲ್ಲವೆಂದು ಇವರ ತಂದೆ ನಾಗಭೋವಿಯವರು ಮಾರಾಟಾಧಿಕಾರಿಯವರಿಗೆ ತಿಳಿಸಿರುತ್ತಾರೆ ಮತ್ತು ಅವರು ಫಾರಂ ನಂ. 2ನ್ನು ಪಡೆಯಲು ನಿರಾಕರಿಸಿರುವುದಾಗಿ ಮಾರಾಟಾಧಿಕಾರಿ ಷರಾ ಬರೆದಿರುತ್ತಾರೆ. ಇದೇ ರೀತಿ ಫಾರಂ ನಂ. 6ನ್ನು ಸ್ವೀಕರಿಸದೇ ತಿರಸ್ಕರಿಸಿರುತ್ತಾರೆ. ಆಗ ಮಾರಾಟಾಧಿಕಾರಿಯವರು ವಸೂಲಿ ಕ್ರಮ ಮುಂದುವರೆಸಿ ದಿನಾಂಕ: 31.7.2001ರಲ್ಲಿ ಪ್ರತಿವಾದಿಗೆ ಸಂಬಂಧಪಟ್ಟ ಸ್ಥಿರ ಸ್ವತ್ತುಗಳನ್ನು ಸಹಕಾರಿ ಕಾಯಿದೆ ಕಲಂ 103ರ ರೀತ್ಯಾ ಎ.ಬಿ.ಜಿ ಮಾಡಲಾಗಿದ್ದ ಸ್ಥಿರ ಸ್ವತ್ತುಗಳನ್ನು ದಿನಾಂಕ: 11.8.2003 ರಂದು ಬಹಿರಂಗ ಹರಾಜಿಗೆ ಗುರಿಪಡಿಸಲಾಗಿದೆ. ಈ ಸಂಬಂಧದ ಫಾರಂ ನಂ. 8, 9 ಮತ್ತು ಹರಾಜು ಇಸ್ತಿಹಾರ್‌ಗಳನ್ನು ತೀರ್ಪು ಋಣಿದಾರರು ಸ್ವೀಕರಿಸಿರುವುದಿಲ್ಲ ಆದ ಕಾರಣ ನಿಯಮ 38(2)(ಎ) ರೀತಿ ಜಾರಿ ಮಾಡಿರುತ್ತಾರೆ. ಸದರಿ ಬಹಿರಂಗ ಹರಾಜಿನಲ್ಲಿ ಬಿಡ್‌ದಾರರು ಬಾರದೇ ಇರುವುದರಿಂದ ಡಿಕ್ರಿ ಬಾಕಿದಾರನ ಸ್ಥಿರ ಸ್ವತ್ತುಗಳನ್ನು ಸಂಘಕ್ಕೆ ಬರಬೇಕಾದ ಅಸಲು, ಬಡ್ಡಿ, ಅಮಲ್ಜಾರಿ ಶುಲ್ಕ ಮತ್ತು ಇತರೆ ಖರ್ಚುಗಳು ಸೇರಿ ಒಟ್ಟು ರೂ. 12,48,641-06 ಹರಾಜು ದಿನಾಂಕಕ್ಕೆ ಬಾಕಿ ಇರುವುದಾಗಿ ಸಂಘದ ಕಾರ್ಯದರ್ಶಿಯವರು ಸಲ್ಲಿಸಿರುವ ದೃಢೀಕರಣ ಪತ್ರದಿಂದ ತಿಳಿದು ಬಂದಿದೆ.

ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಗಳನ್ನು ಕಕ್ಷಿದಾರರ ವಾದಿ ಸಂಘಕ್ಕೆ ವರ್ಗಾಯಿಸಲು ವಿವರವಾದ ನೋಟಿಸನ್ನು ಉಲ್ಲೇಖ(2) ರ ರೀತ್ಯಾ ನೀಡಲಾಗಿತ್ತು. ಈ ನೋಟಿಸನ್ನು ನಾಗಾಭೋವಿ, ಸುಂಕಪ್ಪ ಸ್ವೀಕರಿಸದೆ ತಿರಸ್ಕರಿಸಿರುತ್ತಾರೆ ಮತ್ತು ಎನ್. ಹನುಮಂತರಾಯಪ್ಪನ ಕೊನೆ ವಾಸಸ್ಥಾನದ ಬಾಗಿಲಿಗೆ ಚಿಗಟಾಯಿಸಲಾಗಿರುತ್ತದೆ. ಇಂತಹ ಇದರ ವರ್ಗಾವಣೆ ಬಗ್ಗೆ ಯಾವುದೇ ವಿಧವಾದ ತಕರಾರು ಅರ್ಜಿ ಬಂದಿರುವುದಿಲ್ಲ. ಆದ್ದರಿಂದ ಮಾರಾಟಾಧಿಕಾರಿಗಳು ನಿಯಮ 441, ಡಿ.ಸಿ.ಸಿ. ಬ್ಯಾಂಕ್ ನಿ., ಮಧುಗಿರಿ ಶಾಖೆ ಇವರು ಬಿಡ್‌ದಾರರು ಬರಲಿಲ್ಲವಾದ ಕಾರಣದಿಂದ ವಾದಿ ಸಂಘದ ಹೆಸರಿಗೆ ಬಿಡ್ ನಿಲ್ಲಿಸಿರುವುದನ್ನು ಒಪ್ಪಿ ಈ ಕೆಳಕಂಡ ಡಿಕ್ರಿ ಬಾಕಿದಾರನ ಅನ್ವಯ ಭಾಗಶಃ ಸ್ಥಿರ ಸ್ವತ್ತುಗಳನ್ನು ಡಿಕ್ರಿ ಹೊಂದಿದ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಬುಕ್ಕಾಪಟ್ಟಣ ಶಿರಾ ತಾಲ್ಲೂಕು ಇದರ ಹೆಸರಿಗೆ ವರ್ಗಾವಣೆ ಆದೇಶ ಮಾಡಿ ನೀಡಲಾಗಿದೆ.

## ಆದೇಶ

## ಸ.ಸಂ.ಸ.ನಿ.33:ಎಜಿಎನ್:ಇಎಕ್ಸ್‌ಎನ್: ಸೇಲ್:50:2003-04 ದಿನಾಂಕ: 26ನೇ ಫೆಬ್ರವರಿ 2004

ಶ್ರೀ ಟಿ. ಮುರಳಿಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 101 'ಬಿ' ರ ಅನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಮ್‌ಡಬ್ಲ್ಯೂ:69:ಸಿಎಲ್‌ಎಮ್: 2001 ದಿನಾಂಕ: 21.11.2001ರ ರೀತ್ಯಾ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ. ಎನ್. ಹನುಮಂತರಾಯಪ್ಪ ಇವರ ಕಾನೂನು ವಾರಸುದಾರರಾದ ಕ್ರಮವಾಗಿ ತಂದೆ, ಮತ್ತು ಸಹೋದರ ನಾಗಾಭೋವಿ ಬಿನ್ ಹನುಮಂತಭೋವಿ ಮತ್ತು ಸುಂಕಪ್ಪ ಬಿನ್ ನಾಗಭೋವಿ ಇವರ ಹೆಸರಿನಲ್ಲಿರುವ ಈ ಕೆಳಕಂಡ ಷೆಡ್ಯೂಲ್ ಸ್ಥಿರ ಸ್ವತ್ತುಗಳನ್ನು ವಾದಿ ಸಂಘವಾದ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಬುಕ್ಕಾಪಟ್ಟಣ ಶಿರಾ ತಾಲ್ಲೂಕು ಇವರ ಹೆಸರಿಗೆ ವರ್ಗಾವಣೆ ಆದೇಶ ನೀಡಿರುತ್ತೇನೆ. ಕಾಯಿದೆ ಅನ್ವಯ ನಮೂನೆಗಳನ್ನು ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

ಕಛೇರಿಯ ಮುದ್ರೆ ಮತ್ತು ಸಹಿಯೊಂದಿಗೆ ದಿನಾಂಕ 26.2.2004 ರಂದು ಈ ಸ್ಥಿರ ಸ್ವತ್ತುಗಳನ್ನು ವರ್ಗಾವಣೆ ಮಾಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

**ವರ್ಗಾವಣೆಗೊಂಡ ಸ್ಥಿರ ಸ್ವತ್ತುಗಳ ವಿವರ**

| ಕ್ರ. ಸಂ. | ಖಾತೆದಾರನ ಹೆಸರು: ವಿಳಾಸ | ಖಾತೆ ನಂ. | ಸರ್ವೆನಂ. ಅಸೆಸ್ ಮೆಂಟ್ ನಂ. | ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ನಾಗಭೋವಿ ಬಿನ್ ಹನುಮಂತಭೋವಿ ಮಾದೇನಹಳ್ಳಿ ಬುಕ್ಕಾಪಟ್ಟಣ ಹೋಬಳಿ ಶಿರಾ ತಾಲ್ಲೂಕು ತುಮಕೂರು ಜಿಲ್ಲೆ | 118 | 109 | 1.39 | ಖುಷ್ಕಿ | ಪೂ: ದೊಡ್ಡರಂಗಪ್ಪ<br>ಪ: ಸರ್ಕಾರಿ ಕೆರೆ<br>ಉ: ಕೆರೆ ಅಂಗಳ<br>ದ: ಇದೇ ಸರ್ವೆನಂ. ಉಳಿಕೆ ಜಮೀನು |

| 1 | 2 | 3 | 4 | 5 | 6 | 7 |
|---|---|---|---|---|---|---|
| 2. | ನಾಗಭೋವಿ ಬಿನ್ ಹನುಮಂತಭೋವಿ ರಾಮಲಿಂಗಾಪುರ ಗ್ರಾಮ ಪಂಚಾಯಿತಿ, ರಾಮಲಿಂಗಾಪುರ, ಶಿರಾ ತಾಲ್ಲೂಕು | 115 | 171 | - | ಮನೆ | ಪೂ: ಸರ್ಕಾರಿ ರಸ್ತೆ<br>ಪ: ಸರ್ಕಾರಿ ಗ್ರಾಮ ಠಾಣೆ<br>ಉ: ನಾಗಾಭೋವಿ ನಿವೇಶನ<br>ದ: ಹನುಮಂತಭೋವಿ ಬಿನ್ ತಿಮ್ಮಭೋವಿ |
| 3. | ಸುಂಕಪ್ಪ ಬಿನ್ ನಾಗಭೋವಿ ರಾಮಲಿಂಗಾಪುರ ಗ್ರಾಮ ಪಂಚಾಯಿತಿ, ರಾಮಲಿಂಗಾಪುರ, ಶಿರಾ ತಾಲ್ಲೂಕು | 289 | 45 | 40 x 30 ನಿವೇಶನ | | ಪೂ: ಸರ್ಕಾರಿ ರಸ್ತೆ<br>ಪ: ಗ್ರಾಮಠಾಣಾ<br>ಉ: ಸುಂಕಾಭೋವಿ<br>ದ: ನಾಗಾಭೋವಿ ಮನೆ |

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಬಂಧನೆ-38ಎ ನೋಡಿ)**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರ ಅನ್ವಯ ಪರಭಾರೆಯ ಬಗ್ಗೆ ಪ್ರಮಾಣ ಪತ್ರ**

ವ್ಯವಸಾಯ ಸೇವಾ ಸಹಕಾರ ಸಂಘ ನಿ. ಬುಕ್ಕಾಪಟ್ಟಣ ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, ಇದರ ಕಾರ್ಯದರ್ಶಿಯವರು ಪಡೆದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 69ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಎನ್. ಹನುಮಂತರಾಯ ಬಿನ್ ನಾಗಾಭೋವಿ ಮಾಜಿ ಸಹಾಯಕ ಕಾರ್ಯದರ್ಶಿ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಬುಕ್ಕಾಪಟ್ಟಣ ಶಿರಾ ತಾಲ್ಲೂಕು (ಖಾಯಂ ವಿಳಾಸ: ರಾಮಲಿಂಗಾಪುರ) ಇವರ ಕಾನೂನು ವಾರಸುದಾರರ ಸ್ಥಿರ ಸ್ವತ್ತುಗಳ ಮಾರಾಟದ ಬಗ್ಗೆ ದಿನಾಂಕ 11.8.2003 ರಂದು ಬಹಿರಂಗ ಹರಾಜು ಇಟ್ಟಿದ್ದು ಹರಾಜಿನಲ್ಲಿ ಕೊಂಡು ಕೊಳ್ಳುವವರು ಯಾರೂ ಬರಲಿಲ್ಲವಾದ್ದರಿಂದ ಸದರಿ ಸ್ವತ್ತುಗಳನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ಮಾರಾಟಾಧಿಕಾರಿಯು ತಿಳಿಸಿರುವುದನ್ನು ನಾನು ಸಮಾಧಾನ ಹೊಂದಿರುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಬಾಧ್ಯತೆ ಕೋ-ಆಪರೇಟೀವ್ ಸಂಘ ನಿ., ಬುಕ್ಕಾಪಟ್ಟಣ ಶಿರಾ ತಾಲ್ಲೂಕು ಈ ಸಂಘದಲ್ಲಿ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಗಳಿಗೆ ಒಳಪಟ್ಟು ಕೋ ಆಪರೇಟೀವ್ ಸಂಘ ನಿ., ಬುಕ್ಕಾಪಟ್ಟಣ, ಶಿರಾ ತಾಲ್ಲೂಕು ಇದಕ್ಕೆ ಒಪ್ಪಿಸತಕ್ಕದ್ದೆಂದು ಸದರಿ ಅಧಿನಿಯಮದ 101 ಬಿ ಪ್ರಕರಣದ ಅನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ವರ್ಗಾವಣೆಗೊಂಡ ಸ್ಥಿರ ಸ್ವತ್ತಿನ ಷೆಡ್ಯೂಲ್ ವಿವರ**

| ಕ್ರ. ಸಂ. | ಖಾತೆದಾರನ ಹೆಸರು: ವಿಳಾಸ | ಖಾತೆ ನಂ. | ಸರ್ವೆನಂ. ಅಸೆಸ್ ಮೆಂಟ್ ನಂ. | ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|---|---|
| 1. | ನಾಗಭೋವಿ ಬಿನ್ ಹನುಮಂತಭೋವಿ ಮಾದೇನಹಳ್ಳಿ ಬುಕ್ಕಾಪಟ್ಟಣ ಹೋಬಳಿ ಶಿರಾ ತಾಲ್ಲೂಕು ತುಮಕೂರು ಜಿಲ್ಲೆ | 118 | 109 | 1.39 | ಖುಷ್ಕಿ | ಪೂ: ದೊಡ್ಡರಂಗಪ್ಪ<br>ಪ: ಸರ್ಕಾರಿ ಕೆರೆ<br>ಉ: ಕೆರೆ ಅಂಗಳ<br>ದ: ಇದೇ ಸರ್ವೆನಂ. ಉಳಿಕೆ ಜಮೀನು |
| 2. | ನಾಗಭೋವಿ ಬಿನ್ ಹನುಮಂತಭೋವಿ ರಾಮಲಿಂಗಾಪುರ ಗ್ರಾಮ ಪಂಚಾಯಿತಿ, ರಾಮಲಿಂಗಾಪುರ, ಶಿರಾ ತಾಲ್ಲೂಕು | 115 | 171 | - | ಮನೆ | ಪೂ: ಸರ್ಕಾರಿ ರಸ್ತೆ<br>ಪ: ಸರ್ಕಾರಿ ಗ್ರಾಮ ಠಾಣೆ<br>ಉ: ನಾಗಾಭೋವಿ ನಿವೇಶನ<br>ದ: ಹನುಮಂತಭೋವಿ ಬಿನ್ ತಿಮ್ಮಭೋವಿ |
| 3. | ಸುಂಕಪ್ಪ ಬಿನ್ ನಾಗಭೋವಿ ರಾಮಲಿಂಗಾಪುರ ಗ್ರಾಮ ಪಂಚಾಯಿತಿ, ರಾಮಲಿಂಗಾಪುರ, ಶಿರಾ ತಾಲ್ಲೂಕು | 289 | 45 | 40 x 30 ನಿವೇಶನ | | ಪೂ: ಸರ್ಕಾರಿ ರಸ್ತೆ<br>ಪ: ಗ್ರಾಮಠಾಣಾ<br>ಉ: ಸುಂಕಾಭೋವಿ<br>ದ: ನಾಗಾಭೋವಿ ಮನೆ |

**ಷರತ್ತು ಮತ್ತು ನಿಯಮಗಳು**

1. ಸಂಘಕ್ಕೆ ವರ್ಗ ಮಾಡುವ ಸ್ಥಿರ ಸ್ವತ್ತುಗಳನ್ನು ಸಹಕಾರಿ ಕಾಯಿದೆ ನಿಯಮ 13ರ ರೀತಿ ಸಂಘವು ಸಾಧ್ಯವಾದಷ್ಟು ಬೇಗ ಸಂಘಕ್ಕೆ ಹಾಗೂ ಬಾಕಿ ಕೊಡಲು ತಪ್ಪಿದವನಿಗೆ ಹೆಚ್ಚು ಅನುಕೂಲವಾಗುವಂತೆ ಆಸ್ತಿಯನ್ನು ಮಾರಾಟ ಮಾಡಲು ಸಾಧ್ಯವಾದಷ್ಟು ಪ್ರಯತ್ನವನ್ನು ಮಾಡತಕ್ಕದ್ದು.

2. ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಆಸ್ತಿಯನ್ನು ಮೂಲತಃ ಹೊಂದಿರುವ ಬಾಕಿ ಕೊಡಲು ತಪ್ಪಿದವನಿಗೆ ಯಾವಾಗಲೂ ಮೊದಲನೆ ಅವಕಾಶವನ್ನು ಕೊಡತಕ್ಕದ್ದು.
3. ಈ ಆಸ್ತಿಯ ವರ್ಗಾವಣೆ ನಂತರ ಪುನಃ ಮಾರಾಟ ಮಾಡಿದಾಗ ಬರುಬಹುದಾದ ಬಾಗಶ: ಹಣವನ್ನು ಸಂಘಕ್ಕೆ ಜಮಾಖರ್ಚು ಮಾಡಿಕೊಳ್ಳತಕ್ಕದ್ದು. ಆದ್ದರಿಂದ ಈ ಆಸ್ತಿಯ ವರ್ಗಾವಣೆಯನ್ನು ಸಂಘವು ಪಡೆದಿರುವ ಡಿಕ್ರಿ ಮೊಬಲಗಿನ ಭಾಗಶ: ಹಣದ ವಸೂಲಾತಿಗಾಗಿ ಈ ಆದೇಶ ನೀಡಲಾಗಿದೆ.

ಪಿ.ಆರ್.349 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ-ಉಪ-ವಿಭಾಗ, ಮಧುಗಿರಿ, ತುಮಕೂರು ಜಿಲ್ಲೆ ಇವರ ನಡವಳಿಕೆಗಳು**

**ವಿಷಯ :** ಶ್ರೀ ಆರ್. ನಾರಾಯಣಪ್ಪ ಬಿನ್ ಪೂ: ಗಂಗಪ್ಪ ಮೊಸರು ಕುಂಟೆ, ಗೌಡಗೆರೆ ಹೋಬಳಿ, ಶಿರಾ ತಾಲ್ಲೂಕು ಇವರ ಸ್ಥಿರಾಸ್ತಿಯನ್ನು ದಿನಾಂಕ: 16.2.2002 ರಂದು ನಡೆದ ಬಹಿರಂಗ ಹರಾಜು ಮಾರಾಟದಲ್ಲಿ ಖರೀದಿಸಿರುವ ಸ್ಥಿರಸ್ವತ್ತನ್ನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ತಾವರೆಕೆರೆ, ಶಿರಾ ತಾಲ್ಲೂಕು ಈ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡುವ ಬಗೆಗೆ.

**ಉಲ್ಲೇಖ :**
1. ಮಾರಾಟಾಧಿಕಾರಿ ನಿಯಮ 441 ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ. ಮಧುಗಿರಿ ಶಾಖೆ ಇವರ ಪ್ರಸ್ತಾವನೆ ಪತ್ರದ ನಂ. ಮಾ.ಅ.ನಿ.441, ಬಿ.ಡಿ.ಸಿ.ಸಿ. ಬ್ಯಾಂಕ್:ಮಾ.ಸ್ಥಿ:43:02-03 ದಿನಾಂಕ: 12.8.2002
2. ಈ ಕಛೇರಿಯ ಈ ಕೆಳಕಂಡ ಸಮಸಂಖ್ಯೆ ಪತ್ರದ ದಿನಾಂಕ: 12.09.2003 ಮತ್ತು 22.12.2003
3. ವ್ಯವಸ್ಥಾಪಕರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ತಾವರೆಕೆರೆ, ಶಿರಾ ತಾಲ್ಲೂಕು ಇವರ ವರದಿ ಪತ್ರದ ದಿನಾಂಕ: 30.12.2003

**ಪ್ರಸ್ತಾವನೆ:**

ತುಮಕೂರು ಜಿಲ್ಲೆ ಶಿರಾ ತಾಲ್ಲೂಕು, ತಾವರೆಕೆರೆ ಗ್ರಾಮದಲ್ಲಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ 'ನಿ' ವು ಕರ್ನಾಟಕ ಸಹಕಾರ ಕಾಯಿದೆ 1950 ನಿಯಮ 1960ರ ಅನ್ವಯ ನೋಂದಾವಣೆಯಾಗಿದ್ದು ನೋಂದಣೆಗೊಂಡ ಉಪನಿಯಮಗಳ ಅನ್ವಯ ಕಾರ್ಯನಿರ್ವಹಿಸುತ್ತಿದೆ. ಈ ಸಹಕಾರ ಸಂಘದ: ಬ್ಯಾಂಕಿನ ಕಾರ್ಯದರ್ಶಿಯಾಗಿದ್ದ ಆರ್. ನಾರಾಯಣಪ್ಪ ನವರು ಸಂಘದ ಹಣವನ್ನು ದುರುಪಯೋಗ ಮಾಡಿದ್ದು, ಇವರ ಮೇಲೆ ಸಹಕಾರಿ ಕಾಯಿದೆ ಕಲಂ 70ರ ಅಡಿಯಲ್ಲಿ ದಾವೆ ನಂ. 227:69-70ರ ರೀತ್ಯಾ ದಾವೆಯನ್ನು ಹೂಡಿ ದಿನಾಂಕ: 7.9.1969 ರಂದು ರೂ. 11229-48 ಮತ್ತು ಶೇ 6ರ ಬಡ್ಡಿ ಸೇರಿಸಲು ಡಿಕ್ರಿ ನೀಡಿರುತ್ತದೆ. ನಂತರ ಇದು ಅಮಲ್ಜಾರಿ ನಂ.13: 70-71 ದಿನಾಂಕ: 24.8.1970ರ ಪ್ರಕಾರ ಸಂಬಂಧಪಟ್ಟ ಪ್ರಾಧಿಕಾರದಲ್ಲಿ ಅಮಲ್ಜಾರಿ ರೂ.10284-98ಗಳಿಗೆ ದಾಖಲಾಗಿರುತ್ತದೆ.

ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಬಾಕಿ ಹಣವು ಸಂಘಕ್ಕೆ ಜಮೆ ಆಗದೇ ಇದ್ದ ಕಾರಣದಿಂದ ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ನಂ. 13:70-71ರ ಅಮಲ್ಜಾರಿ ಅರ್ಜಿಯನ್ನು ಸಂಘಕ್ಕೆ ಆರ್ಥಿಕ ನೆರವು ನೀಡಿ ಬ್ಯಾಂಕಿನಲ್ಲಿರುವ ಮಾರಾಟಾಧಿಕಾರಿಗಳು ನಿಯಮ 441, ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಮಧುಗಿರಿ ಶಾಖೆ ಇವರಿಗೆ ವಸೂಲಿ ಕ್ರಮ ಕೈಗೊಳ್ಳಲು ಈ ಕಡತವನ್ನು ವಹಿಸಲಾಗಿತ್ತು. ಮಾರಾಟಾಧಿಕಾರಿಯವರು ವಸೂಲಿ ಕ್ರಮದ ಅಡಿಯಲ್ಲಿ ನಿಗದಿತವಾದ ಫಾರಂ ನಂ.2, 6ರ ನೋಟೀಸ್‌ಗಳನ್ನು ಅನೇಕ ಬಾರಿ ಜಾರಿ ಮಾಡಿಸಿರುತ್ತಾರೆ. ಆದಾಗ್ಯೂ ದುರುಪಯೋಗದ ಹಣ ವಸೂಲಾಗಿರುವುದಿಲ್ಲ. ಆಗ ಮಾರಾಟಾಧಿಕಾರಿಯವರು ವಸೂಲಿ ಕ್ರಮ ಮುಂದುವರೆಸಿ ಪ್ರತಿವಾದಿಗೆ ಸಂಬಂಧಪಟ್ಟ ಸ್ಥಿರ ಸ್ವತ್ತನ್ನು ದಿನಾಂಕ: 16.2.2002 ರಂದು ಬಹಿರಂಗ ಹರಾಜು ನಡೆಸಲು ಗುರಿ ಪಡಿಸಲಾಗಿದೆ. ಈ ಸಂಬಂಧದ ಫಾರಂ ನಂ. 8, 9 ಮತ್ತು ಹರಾಜು ಇಸ್ತಿಹಾರ್‌ಗಳನ್ನು ತೀರ್ಪಿನ ಋಣಿದಾರರಿಗೆ ಜಾರಿಗೊಳಿಸಿರುತ್ತದೆ. ಆಗ ಬಹಿರಂಗ ಹರಾಜನ್ನು ದಿನಾಂಕ: 16.2.2002 ರಂದು ನಡೆಸಲಾಗಿದ್ದು ಈ ಹರಾಜಿಗೆ ಬಿಡ್‌ದಾರರು ಬಾರದೇ ಇರುವುದರಿಂದ ಡಿಕ್ರಿ ಬಾಕಿದಾರನ ಸ್ಥಿರ ಸ್ವತ್ತುಗಳನ್ನು ಸಂಘಕ್ಕೆ ಬರಬೇಕಾದ ಅಸಲು, ಬಡ್ಡಿ, ಅಮಲ್ಜಾರಿ ಶುಲ್ಕ ಮತ್ತು ಇತರೆ ಖರ್ಚುಗಳು ಸೇರಿ ಒಟ್ಟು ರೂ. 26917-00 ದಿನಾಂಕ: 31.5.2002ಕ್ಕೆ ಬಾಕಿ ಇರುವುದಾಗಿ ಚೆಕ್‌ಲಿಸ್ಟಿನಿಂದ ತಿಳಿದುಬಂದಿದೆ.

ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಯನ್ನು ಕಕ್ಷಿದಾರನ ವಾದಿ ಬ್ಯಾಂಕಿಗೆ ವರ್ಗಾಯಿಸಲು ವಿವರವಾದ ನೋಟೀಸನ್ನು ಉಲ್ಲೇಖ(2)ರ ರೀತ್ಯಾ ನೀಡಲಾಗಿತ್ತು. ಅದರ ವರ್ಗಾವಣೆ ಬಗ್ಗೆ ಯಾವುದೇ ವಿಧವಾದ ತಕರಾರು ಅರ್ಜಿ ಸಹ ಬಂದಿರುವುದಿಲ್ಲ ಮತ್ತು ಅಮಲ್ಜಾರಿ ಮೊಬಲಗನ್ನೂ ಸಹ ಮರುಪಾವತಿ ಮಾಡಿರುವುದಿಲ್ಲ ಈ ಬಗೆಗೆ ಉಲ್ಲೇಖ (3)ರ ರೀತಿ ವರದಿ ಪಡೆಯಲಾಗಿದೆ. ಆದ್ದರಿಂದ ಮಾರಾಟಾಧಿಕಾರಿಗಳು ನಿಯಮ 441, ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಮಧುಗಿರಿ ಇವರು ಬಿಡ್‌ದಾರರು ಯಾರೂ ಬರಲಿಲ್ಲವಾದ ಕಾರಣದಿಂದ ವಾದಿ ಬ್ಯಾಂಕಿನ ಹೆಸರಿಗೆ ಬಿಡ್ ನಿಲ್ಲಿಸಿರುವುದನ್ನು ಒಪ್ಪಿ, ಈ ಕೆಳಕಂಡ ಡಿಕ್ರಿ ಬಾಕಿದಾರನ ಅನ್ವಯ ಭಾಗಶ: ಸ್ಥಿರಸ್ವತ್ತನ್ನು ಡಿಕ್ರಿಹೊಂದಿದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ ತಾವರೇಕೆರೆ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ ಇದರ ಹೆಸರಿಗೆ ವರ್ಗಾವಣೆ ಆದೇಶ ಮಾಡಿ ನೀಡಲಾಗಿದೆ.

**ಆದೇಶ**

**ಸ.ಸಂ.ಸ.ನಿ:33:ಎಜಿಎನ್:ಇಎಕ್ಸ್‌ಎನ್:ಸೇಲ್:40:2003-04 ದಿನಾಂಕ: 26ನೇ ಫೆಬ್ರವರಿ 2004**

ಶ್ರೀ ಟಿ. ಮುರಳಿಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ-ಉಪ-ವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 101 'ಬಿ'ರ ಅನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001ರ ರೀತ್ಯಾ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ

ಶ್ರೀ ಆರ್. ನಾರಾಯಣಪ್ಪ ಬಿನ್ ಪೂ: ರಂಗಪ್ಪ, ಮೊಸರು ಕುಂಟೆ, ಗೌಡಿಗೆರೆ ಹೋಬಳಿ, ಶಿರಾ ತಾಲ್ಲೂಕು ಇವರ ಭಾಗಾಯ್ತು ಜಮೀನಿನ ವಿಸ್ತೀರ್ಣ 0.21 ಕುಂಟೆ, ಸರ್ವೆ ನಂ. 79:6 ಚೆಕ್ಕುಬಂದಿ ಪೂರ್ವಕ್ಕೆ: ತಿಮ್ಮಯ್ಯ, ಪಶ್ಚಿಮಕ್ಕೆ: ಕೆಂಚಮ್ಮ, ಉತ್ತರಕ್ಕೆ: ತಿಮ್ಮರಾಯಪ್ಪ ದಕ್ಷಿಣಕ್ಕೆ: ಮೂಡ್ಲಪ್ಪ ಈ ಸ್ಥಿರಾಸ್ತಿಯನ್ನು ವಾದಿ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಆದೇಶ ನೀಡಿರುತ್ತೇನೆ. ಕಾಯಿದೆ ಅನ್ವಯ ನಮೂನೆ-8ನ್ನು ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

ಕಛೇರಿಯ ಮುದ್ರೆ ಮತ್ತು ಸಹಿಯೊಂದಿಗೆ ದಿನಾಂಕ: 26.2.2004 ರಂದು ಈ ಸ್ಥಿರ ಸ್ವತ್ತನ್ನು ವರ್ಗಾವಣೆ ಮಾಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ, ಮಧುಗಿರಿ.

## ನಮೂನೆ-8

### (ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಬಂಧನೆ-38ಎ ನೋಡಿ)

### ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರ ಅನ್ವಯ ಪರಭಾರೆಯ ಬಗ್ಗೆ ಪ್ರಮಾಣ ಪತ್ರ

ತುಮಕೂರು ಜಿಲ್ಲಾ, ಶಿರಾ ತಾಲ್ಲೂಕು, ಗೌಡಿಗೆರೆ ಹೋಬಳಿ, ತಾವರೇಕೆರೆ ಗ್ರಾಮದಲ್ಲಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ ತಾವರೇಕೆರೆ ಇವರ ವ್ಯವಸ್ಥಾಪಕರು ಪಡೆದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 1959ರ ಕಲಂ 70ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಆರ್. ನಾರಾಯಣಪ್ಪ ಬಿನ್ ಪೂ: ರಂಗಪ್ಪ, ಮೊಸರುಕುಂಟೆ, ಗೌಡಿಗೆರೆ ಹೋಬಳಿ, ಶಿರಾ ತಾಲ್ಲೂಕು ಇವರ ಸ್ಥಿರ ಸ್ವತ್ತಿನ ಮಾರಾಟದ ಬಗ್ಗೆ ದಿನಾಂಕ: 16.2.2002 ರಂದು ಬಹಿರಂಗ ಹರಾಜು ಇಟ್ಟಿದ್ದು ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಬರಲಿಲ್ಲವಾದ್ದರಿಂದ ಸದರಿ ಸ್ವತ್ತನ್ನೂ ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ಮಾರಾಟಾಧಿಕಾರಿಯು ತಿಳಿಸಿರುವುದನ್ನು ನಾನು ಸಮಾಧಾನ ಹೊಂದಿರುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಬಾಧ್ಯತೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ತಾವರೇಕೆರೆ, ಶಿರಾ ತಾಲ್ಲೂಕು ಈ ಬ್ಯಾಂಕಿನಲ್ಲಿ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಗಳಿಗೆ ಒಳಪಟ್ಟು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ತಾವರೇಕರೆ, ಶಿರಾ ತಾಲ್ಲೂಕು, ಇದಕ್ಕೆ ಒಪ್ಪಿಸತಕ್ಕದ್ದೆಂದು ಸದರಿ ಅಧಿನಿಯಮದ 101 'ಬಿ' ಪ್ರಕರಣದ ಅನ್ವಯ ಈ ಮೂಲಕ ಆದೇಶ ನೀಡಲಾಗಿದೆ.

### ವರ್ಗಾವಣೆಗೊಂಡ ಸ್ಥಿರ ಸ್ವತ್ತಿನ ಷೆಡ್ಯೂಲ್ ವಿವರ

| ಕ್ರ. ಸಂ. | ಖಾತೆದಾರನ: ಹಕ್ಕುದಾರನ ಹೆಸರು ವಿಳಾಸ | ಸರ್ವೆ ನಂ. | ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|---|
| 1. | ಆರ್. ನಾರಾಯಣಪ್ಪ ಬಿನ್ ಪೂ: ರಂಗಪ್ಪ ಮೊಸರು ಕುಂಟೆ, ಗೌಡಗೆರೆ ಹೋಬಳಿ, ಶಿರಾ ತಾಲ್ಲೂಕು | 79:6 | 0.21 ಕುಂಟೆ | ಭಾಗಾಯ್ತು | ಪೂರ್ವ: ತಿಮ್ಮಯ್ಯ<br>ಪಶ್ಚಿಮ: ಕೆಂಚಮ್ಮ<br>ಉತ್ತರ: ತಿಮ್ಮರಾಯಪ್ಪ<br>ದಕ್ಷಿಣ: ಮೂಡ್ಲಪ್ಪ |

### ಷರತ್ತು ಮತ್ತು ನಿಯಮಗಳು

1. ಸಂಘಕ್ಕೆ ವರ್ಗಮಾಡುವ ಸ್ಥಿರ ಸ್ವತ್ತುಗಳನ್ನು ಸಹಕಾರಿ ಕಾಯಿದೆ ನಿಯಮ 13ರ ರೀತಿ ಸಂಘವು ಸಾಧ್ಯವಾದಷ್ಟು ಬೇಗ ಸಂಘಕ್ಕೆ ಹಾಗೂ ಬಾಕಿ ಕೊಡಲು ತಪ್ಪಿದವನಿಗೆ ಹೆಚ್ಚು ಅನುಕೂಲವಾಗುವಂತೆ ಆಸ್ತಿಯನ್ನು ಮಾರಾಟ ಮಾಡಲು ಸಾಧ್ಯವಾದಷ್ಟು ಪ್ರಯತ್ನವನ್ನು ಮಾಡತಕ್ಕದ್ದು.
2. ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಆಸ್ತಿಯನ್ನು ಮೂಲತಃ ಹೊಂದಿರುವ ಬಾಕಿ ಕೊಡಲು ತಪ್ಪಿದವನಿಗೆ ಯಾವಾಗಲೂ ಮೊದಲನೆ ಅವಕಾಶವನ್ನು ಕೊಡತಕ್ಕದ್ದು.
3. ಈ ಆಸ್ತಿಯ ವರ್ಗಾವಣೆ ನಂತರ ಪುನಃ ಮಾರಾಟ ಮಾಡಿದಾಗ ಬರುಬಹುದಾದ ಭಾಗಶಃ ಹಣವನ್ನು ಸಂಘಕ್ಕೆ ಜಮಾಖರ್ಚು ಮಾಡಿಕೊಳ್ಳತಕ್ಕದ್ದು. ಆದ್ದರಿಂದ ಈ ಆಸ್ತಿಯ ವರ್ಗಾವಣೆಯನ್ನು ಸಂಘವು ಪಡೆದಿರುವ ಡಿಕ್ರಿ ಮೊಬಲಗಿನ ಭಾಗಶಃ ಹಣದ ವಸೂಲಾತಿಗಾಗಿ ಈ ಆದೇಶ ನೀಡಲಾಗಿದೆ.

ಪಿ.ಆರ್.350 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

### ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ-ಉಪ-ವಿಭಾಗ, ಮಧುಗಿರಿ, ತುಮಕೂರು ಜಿಲ್ಲೆ ಇವರ ನಡವಳಿಕೆಗಳು

**ವಿಷಯ :** ನಂಜಮ್ಮ ಕೋಂ ರಂಗಸ್ವಾಮಣ್ಣ, ಕಛೇರಿ ಮೊಹಲ್ಲ, ಶಿರಾ ಇವರ ಸ್ಥಿರಾಸ್ತಿಯಾದ ಮನೆಯನ್ನು ದಿನಾಂಕ: 29.7.2003 ರಂದು ನಡೆದ ಬಹಿರಂಗ ಹರಾಜಿನಲ್ಲಿ ಖರೀದಿಸಿರುವ ಸ್ಥಿರ ಸ್ವತ್ತನ್ನು ಟೌನ್ ಸಹಕಾರ ಬ್ಯಾಂಕ್ ನಿ., ಶಿರಾ, ಈ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ :**
1. ಮಾರಾಟಾಧಿಕಾರಿ ನಿಯಮ 441 ಟೌನ್ ಕೋ ಆಪರೇಟಿವ್ ಬ್ಯಾಂಕ್ ಲಿ., ಶಿರಾ, ಇವರ ಪ್ರಸ್ತಾವನೆ ಪತ್ರದ ನಂ. ಟಿ.ಸಿ. ಬ್ಯಾಂಕ್-ಶಿರಾ: ಹರಾಜು-ಸ್ಥಿರಾಸ್ತಿ/2003-04 ದಿನಾಂಕ: 30.7.2003.
2. ಈ ಕಛೇರಿ ಕೆಳಕಂಡ ಸಮಸಂಖ್ಯೆ ಪತ್ರದ ದಿನಾಂಕ: 23.10.2003
3. ಬ್ಯಾಂಕಿನ ವರದಿ ಪತ್ರದ ನಂ: ಟಿ.ಸಿ.ಬಿ-ಶಿರಾ:ಸೇಲ್ 140ಬಿ:2003-04 ದಿನಾಂಕ: 8.1.2004

**ಪ್ರಸ್ತಾವನೆ:**

ತುಮಕೂರು ಜಿಲ್ಲಾ ಶಿರಾಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕ್ ಕರ್ನಾಟಕ ಸಹಕಾರ ಕಾಯಿದೆ 1959 ನಿಯಮ 1960 ರ ಅನ್ವಯ ನೋಂದಾವಣೆಯಾಗಿದ್ದು, ನೋಂದಣಿಗೊಂಡ ಉಪನಿಯಮಗಳ ಅನ್ವಯ ಕಾರ್ಯನಿರ್ವಹಿಸುತ್ತಿದೆ. ಈ ಸಹಕಾರ ಬ್ಯಾಂಕಿನಲ್ಲಿ ಶ್ರೀಮತಿ ನಂಜಮ್ಮ ಕೋಂ ರಂಗಶ್ಯಾಮಣ್ಣ ಕಛೇರಿ ಮೊಹಲ್ಲಾ ಶಿರಾ ಟೌನ್ ಇವರು ಸಾಲ ಪಡೆದಿದ್ದು, ಅಸಲು, ಬಡ್ಡಿ, ಸುಸ್ತಿಬಡ್ಡಿ, ಇತರೆ ಖರ್ಚು ಒಟ್ಟು ರೂ. 70420-00 ಸುಸ್ತಿಯಾಗಿದ್ದು ವಸೂಲಿಗಾಗಿ ಬ್ಯಾಂಕ್ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯಿದೆ 1959 ಕಲಂ 70ರ ಅಡಿಯಲ್ಲಿ ವಿವಾದ ಸಂಖ್ಯೆ:2708:02-03 ರ ರೀತ್ಯ ದಾವೆಯನ್ನು ಹೂಡಿದ್ದು ಇದರ ತೀರ್ಪು ದಿನಾಂಕ: 11.12.2002 ರಂದು ಹೊರಬಿದ್ದಿರುತ್ತದೆ. ನಂತರ ಅಮಲ್ಜಾರಿ ನಂ:30:2003-04 ರ ಪ್ರಕಾರ ಸಂಬಂಧಪಟ್ಟ ಪ್ರಾಧಿಕಾರವಾದ ಈ ಕಛೇರಿಯಲ್ಲಿಯೇ ದಾಖಲು ಮಾಡಿ ಅಮಲ್ಜಾರಿ ಪಡೆಯಲಾಗಿದೆ.

ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಬಾಕಿ ಹಣವು ಬ್ಯಾಂಕಿಗೆ ಜಮಾ ಆಗದೇ ಇದ್ದ ಕಾರಣದಿಂದ ಡಿಕ್ರಿಯನ್ನು ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ನಂ:30:2003-04ರ ಅರ್ಜಿಯನ್ನು ಅದೇ ಬ್ಯಾಂಕಿನ ಮಾರಾಟಾಧಿಕಾರಿ ವಶಕ್ಕೆ ನೀಡಲಾಗಿತ್ತು ಹಾಗೂ ವಸೂಲಿ ಕ್ರಮಕ್ಕಾಗಿ ಸೂಚಿಸಲಾಗಿತ್ತು. ಮಾರಾಟಾಧಿಕಾರಿಯವರು ವಸೂಲಿ ಕ್ರಮ ನಡೆಸಿ ಡಿಕ್ರಿ ಬಾಕಿದಾರನು ಆಧಾರ ಮಾಡಿದ್ದ ಸ್ಥಿರಾಸ್ತಿಯಾದ ನಿವೇಶನವನ್ನು ದಿನಾಂಕ: 29.7.2003 ರಂದು ಬಹಿರಂಗ ಹರಾಜಿಗೆ ಗುರಿಪಡಿಸಲಾಗಿತ್ತು. ಬಿಡ್‌ದಾರರು ಬಾರದೇ ಇರುವುದರಿಂದ ಡಿಕ್ರಿಬಾಕಿದಾರನ ಸ್ಥಿರ ಸ್ವತ್ತನ್ನು ಬ್ಯಾಂಕಿಗೆ ಬರಬೇಕಾದ ಅಸಲು, ಬಡ್ಡಿ, ಸುಸ್ತಿ ಬಡ್ಡಿ, ಡಿಕ್ರಿ ಮತ್ತು ಅಮಲ್ಜಾರಿ ಫೀ ಮತ್ತು ಇತರೆ ವೆಚ್ಚಸೇರಿ ಹರಾಜು ದಿನಾಂಕಕ್ಕೆ ರೂ. 85,500.00 ಬಾಕಿ ಇರುವುದಾಗಿ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು ಸಲ್ಲಿಸಿರುವ ದೃಢೀಕರಣ ಪತ್ರದಿಂದ ತಿಳಿದುಬಂದಿದೆ.

ಷೆಡ್ಯೂಲ್‌ನಲ್ಲಿ ತೋರಿಸಿರುವ ಮನೆ (ಕಟ್ಟಡ) ಸ್ಥಿರಾಸ್ತಿಯನ್ನು ಕಕ್ಷಿದಾರನ ವಾದಿ ಬ್ಯಾಂಕಿಗೆ ವರ್ಗಾಯಿಸಲು ವಿವರವಾದ ನೋಟೀಸನ್ನು ಉಲ್ಲೇಖ (2)ರ ರೀತಿ ನೀಡಲಾಗಿತ್ತು. ಇದರ ಜಾರಿ ಕುರಿತು ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು ವಿವರವಾದ ವರದಿಯನ್ನು ದಿನಾಂಕ: 27.10.2003 ರ ತಮ್ಮ ಪತ್ರದಲ್ಲಿ ಮಾಡಿರುತ್ತಾರೆ. ಅಂತಿಮವಾಗಿ ತೀರ್ಪಿನ ಋಣಿದಾರರ ಕಡೆಯ ವಾಸಸ್ಥಳವಾದ ಶಿರಾದಲ್ಲಿರುವ ಮನೆಯ ಬಾಗಿಲಿಗೆ ಚಿಕಟಾಯಿಸಿ ಮಹಜರು ಸಲ್ಲಿಸಿರುತ್ತಾರೆ. ಈ ಪ್ರಕರಣದ ಸ್ಥಿರಾಸ್ತಿ ವರ್ಗಾವಣೆ ಕುರಿತು ಯಾವುದೇ ವಿಧವಾದ ತಕರಾರು ಅರ್ಜಿ ಸಹ ಬಂದಿರುವುದಿಲ್ಲ ಹಾಗೂ ಅಮಲ್ಜಾರಿ ಹಣವನ್ನು ಕಕ್ಷಿದಾರ ಬ್ಯಾಂಕಿಗೆ ಸಹಕಾರಿ ಕಾಯಿದೆ ನಿಯಮ 38ಎ (3)ರ ರೀತಿ ನೀಡಿದ ನೋಟೀಸ್‌ಗನುಗುಣವಾಗಿ ಸಹ ಮರುಪಾವತಿ ಮಾಡಿರುವುದಿಲ್ಲ. ಆದುದರಿಂದ ಮಾರಾಟಾಧಿಕಾರಿಗಳು ನಿಯಮ 441, ಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ, ಶಿರಾ ಇವರು ಬಿಡ್‌ದಾರರು ಯಾರೂ ಬರಲಿಲ್ಲವಾದ ಕಾರಣದಿಂದ ವಾದಿ ಬ್ಯಾಂಕಿನ ಹೆಸರಿಗೆ ಬಿಡ್ ನಿಲ್ಲಿಸಿರುವುದನ್ನು ಒಪ್ಪಿ ಈ ಕೆಳಕಂಡ ಡಿಕ್ರಿಬಾಕಿದಾರರ ಅನ್ವಯ ಭಾಗಶಃ ಸ್ಥಿರ ಸ್ವತ್ತಾದ ಮನೆಯನ್ನು ಡಿಕ್ರಿ ಹೊಂದಿದ ಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ, ಶಿರಾ, ತುಮಕೂರು ಜಿಲ್ಲೆ ಈ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಆದೇಶ ಮಾಡಿ ನೀಡಲಾಗಿದೆ.

**ಆದೇಶ**

**ಸ.ಸಂ.ಸ.ನಿ:33:ಎಬಿಎನ್: ಇಎಕ್ಸ್‌ಎನ್:ಸೇಲ್:49/2003-04 ದಿನಾಂಕ: 27ನೇ ಫೆಬ್ರವರಿ 2004**

ಶ್ರೀ ಟಿ. ಮುರಳಿ ಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 101 ಬಿ ರ ಅನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001ರ ರೀತ್ಯ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀಮತಿ ನಂಜಮ್ಮ ಕೋಂ ರಂಗಶ್ಯಾಮಣ್ಣ, ಕಛೇರಿ ಮೊಹಲ್ಲಾ, ಶಿರಾ ಇವರ ಮನೆ ಸ್ಥಿರಾಸ್ತಿ ಖಾನೇಷುಮಾರಿ ನಂಬರ್ 184/2878 ಮನೆ ವಿಸ್ತೀರ್ಣ 25x20 ಅಡಿ ವಿಸ್ತೀರ್ಣದ ಮನೆ, ಇದಕ್ಕೆ ಚಕ್ಕುಬಂದಿ ಪೂರ್ವಕ್ಕೆ: ಪೆರುಮಾಳಪ್ಪನ ನಿವೇಶನ, ಪಶ್ಚಿಮಕ್ಕೆ: ಮಿಡಿಗೇಶಿ ಗೋವಿಂದಪ್ಪನವರ ಸೈಟು, ಉತ್ತರಕ್ಕೆ: ಗಿರಿಯಣ್ಣನ ಮನೆ, ದಕ್ಷಿಣಕ್ಕೆ: ಬಾಬು ನಿವೇಶನ ಈ ಚಕ್ಕುಬಂದಿ ಮಧ್ಯೆ ಇರುವ ಮನೆಯನ್ನು ವಾದಿ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಆದೇಶ ನೀಡಿರುತ್ತೇನೆ. ಕಾಯಿದೆ ಅನ್ವಯ ನಮೂನೆ-8ನ್ನು ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತಾದ ಮನೆಯ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದು ಈ ಆದೇಶಕ್ಕೆ ಲಗತ್ತಿಸಲಾಗಿದೆ.

ಈ ಕಛೇರಿಯ ಮುದ್ರೆ ಮತ್ತು ಸಹಿಯೊಂದಿಗೆ ದಿನಾಂಕ: 27.2.2004 ರಂದು ಈ ಸ್ಥಿರ ಸ್ವತ್ತು ಮನೆಯನ್ನು ವರ್ಗಾವಣೆ ಮಾಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಬಂಧನೆ-38 ಎ ನೋಡಿ)**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರ ಅನ್ವಯ ಪರಭಾರೆಯ ಬಗ್ಗೆ ಪ್ರಮಾಣ ಪತ್ರ**

ತುಮಕೂರು ಜಿಲ್ಲಾ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇದರ ಪ್ರಧಾನ ವ್ಯವಸ್ಥಾಪಕರು ಪಡೆದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 70ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀಮತಿ ನಂಜಮ್ಮ ಕೋಂ ರಂಗಶ್ಯಾಮಣ್ಣ ಕಛೇರಿ ಮೊಹಲ್ಲಾ, ಶಿರಾ ಇವರ ಸ್ಥಿರ ಸ್ವತ್ತಾದ ಮನೆಯ ಮಾರಾಟದ ಬಗ್ಗೆ ದಿನಾಂಕ: 29.7.2003 ರಂದು ಬಹಿರಂಗ ಹರಾಜು ಇಟ್ಟಿದ್ದು

ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಬರಲಿಲ್ಲವಾದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ಮಾರಾಟಾಧಿಕಾರಿಯು ತಿಳಿಸಿರುವುದನ್ನು ನಾನು ಸಮಾಧಾನ ಹೊಂದಿರುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಬಾಧ್ಯತೆ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ಬ್ಯಾಂಕಿನಲ್ಲಿ ನಿರ್ದಿಷ್ಟ ಮಾಡತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಗಳಿಗೆ ಒಳಪಟ್ಟು ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇದಕ್ಕೆ ಒಪ್ಪಿಸತಕ್ಕದ್ದೆಂದು ಸದರಿ ಅಧಿನಿಯಮದ 101ಬಿ ಪ್ರಕರಣದ ಅನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ವರ್ಗಾವಣೆಗೊಂಡ ಸ್ಥಿರ ಸ್ವತ್ತಿನ ಷೆಡ್ಯೂಲ್ ವಿವರ:**

| ಪಟ್ಟಣ | ಖಾನೇಷು ಮಾರಿ ನಂ. | ತರಹೆ | ಅಳತೆ | ಚಕ್ಕುಬಂದಿ |
|---|---|---|---|---|
| ಕಛೇರಿ ಮೊಹಲ್ಲ ಶಿರಾಟೌನ್ | 184/2878 | ಮನೆ | 25x20 ಅಡಿಗಳು | ಪೂರ್ವಕ್ಕೆ : ಪೆರುಮಾಳಪ್ಪನ ನಿವೇಶನ<br>ಪಶ್ಚಿಮಕ್ಕೆ : ಮಿಡಿಗೇಶಿ ಗೋವಿಂದಪ್ಪನವರ ಸೈಟು<br>ಉತ್ತರಕ್ಕೆ : ಗಿರಿಯಣ್ಣನ ಮನೆ<br>ದಕ್ಷಿಣಕ್ಕೆ : ಬಾಬು ನಿವೇಶನ |

**ಷರತ್ತು ಮತ್ತು ನಿಯಮಗಳು**

1. ಬ್ಯಾಂಕಿಗೆ ವರ್ಗಮಾಡುವ ಸ್ಥಿರ ಸ್ವತ್ತುಗಳನ್ನು ಸಹಕಾರಿ ಕಾಯಿದೆ ನಿಯಮ 13ರ ರೀತಿ ಬ್ಯಾಂಕು ಸಾಧ್ಯವಾದಷ್ಟು ಬೇಗ ಬ್ಯಾಂಕಿಗೆ ಹಾಗೂ ಬಾಕಿ ಕೊಡಲು ತಪ್ಪಿದವನಿಗೆ ಹೆಚ್ಚು ಅನುಕೂಲವಾಗುವಂತೆ ಆಸ್ತಿಯನ್ನು ಮಾರಾಟ ಮಾಡಲು ಸಾಧ್ಯವಾದಷ್ಟು ಪ್ರಯತ್ನವನ್ನು ಮಾಡತಕ್ಕದ್ದು.
2. ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಆಸ್ತಿಯನ್ನು ಮೂಲತಃ ಹೊಂದಿರುವ ಬಾಕಿ ಕೊಡಲು ತಪ್ಪಿದವನಿಗೆ ಯಾವಾಗಲೂ ಮೊದಲನೇ ಅವಕಾಶವನ್ನು ಕೊಡತಕ್ಕದ್ದು.
3. ಈ ಆಸ್ತಿಯ ವರ್ಗಾವಣೆಯ ನಂತರ ಪುನಃ ಮಾರಾಟ ಮಾಡಿದಾಗ ಬರಬಹುದಾದ ಪೂರ್ತಿ ಹಣದಲ್ಲಿ ಬ್ಯಾಂಕಿಗೆ ಬರಬಹುದಾದ ಅಮಲ್ಜಾರಿಯ ಪೂರ್ಣಹಣವನ್ನು ಹೊಂದಾಣಿಕೆ ಮಾಡಿಕೊಂಡು, ಉಳಿಕೆ ಹಣವನ್ನು ಆಸ್ತಿಯನ್ನು ಮೂಲತಃ ಹೊಂದಿದ ಬಾಕಿ ಕೊಡಲು ತಪ್ಪಿದವರಿಗೆ ವಾಪಸ್ಸು ನೀಡಿ ವರದಿ ಮಾಡತಕ್ಕದ್ದು.

ಪಿ.ಆರ್.351 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ-ಉಪ-ವಿಭಾಗ, ಮಧುಗಿರಿ,**

**ತುಮಕೂರು ಜಿಲ್ಲೆ ಇವರ ನಡವಳಿಕೆಗಳು**

**ವಿಷಯ :** ಅಮೃತಲಿಂಗಂ ಬಿನ್ ಗೋಪಾಲಸ್ವಾಮಿ ಮೊದಲಿಯಾರ್, ಸಂತೇಪೇಟೆ, ಶಿರಾ ಇವರ ಸ್ಥಿರಾಸ್ತಿಯಾದ ನಿವೇಶನವನ್ನು ದಿನಾಂಕ: 24.7.2003 ರಂದು ನಡೆದ ಬಹಿರಂಗ ಹರಾಜಿನಲ್ಲಿ ಖರೀದಿಸಿರುವ ಸ್ಥಿರ ಸ್ವತ್ತನ್ನು ಟೌನ್ ಸಹಕಾರ ಬ್ಯಾಂಕ್ ನಿ., ಶಿರಾ, ಈ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡುವ ಬಗೆಗೆ.

**ಉಲ್ಲೇಖ :**
1. ಮಾರಾಟಾಧಿಕಾರಿ ನಿಯಮ 441 ಟೌನ್ ಕೋ ಆಪರೇಟಿವ್ ಬ್ಯಾಂಕ್ ಲಿ., ಶಿರಾ, ಇವರ ಪ್ರಸ್ತಾವನೆ ಪತ್ರದ ನಂ. ಟಿ.ಸಿ. ಬ್ಯಾಂಕ್-ಶಿರಾ: ಹರಾಜು-ಸ್ಥಿರಾಸ್ತಿ/2003-04 ದಿನಾಂಕ: 25.7.2003.
2. ಈ ಕಛೇರಿ ಕೆಳಕಂಡ ಸಮಸಂಖ್ಯೆ ಪತ್ರದ ದಿನಾಂಕ: 23.10.2003
3. ಬ್ಯಾಂಕಿನ ವರದಿ ಪತ್ರದ ನಂ: ಟಿ.ಸಿ.ಬಿ-ಶಿರಾ:ಸೇಲ್ 140ಎ:2003-04 ದಿನಾಂಕ: 8.1.2004

**ಪ್ರಸ್ತಾವನೆ:**

ತುಮಕೂರು ಜಿಲ್ಲಾ ಶಿರಾ ಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕ್ ಕರ್ನಾಟಕ ಸಹಕಾರ ಕಾಯಿದೆ 1959 ನಿಯಮ 1960 ರ ಅನ್ವಯ ನೋಂದಾವಣೆಯಾಗಿದ್ದು, ನೋಂದಣೆಗೊಂಡ ಉಪನಿಯಮಗಳ ಅನ್ವಯ ಕಾರ್ಯನಿರ್ವಹಿಸುತ್ತಿದೆ. ಈ ಸಹಕಾರ ಬ್ಯಾಂಕಿನಲ್ಲಿ ಶ್ರೀ ಅಮೃತಲಿಂಗಂ ಬಿನ್ ಗೋಪಾಲಸ್ವಾಮಿ ಮೊದಲಿಯಾರ್, ಸಂತೇಪೇಟೆ, ಶಿರಾ ಟೌನ್ ಇವರು ಸಾಲ ಪಡೆದಿದ್ದು, ಅಸಲು, ಬಡ್ಡಿ, ಸುಸ್ತಿಬಡ್ಡಿ ಇತರೆ ಖರ್ಚು ಒಟ್ಟು ರೂ.32851-00 ಸುಸ್ತಿಯಾಗಿದ್ದು ವಸೂಲಿಗಾಗಿ ಬ್ಯಾಂಕ್ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯಿದೆ 1959 ಕಲಂ 70ರ ಅಡಿಯಲ್ಲಿ ವಿವಾದ ಸಂಖ್ಯೆ: 860/96-97ರ ರೀತ್ಯ ದಾವೆಯನ್ನು ಹೂಡಿದ್ದು ಇದರ ತೀರ್ಪು ದಿನಾಂಕ: 31.12.1996 ರಂದು ಹೊರಬಿದ್ದಿರುತ್ತದೆ. ನಂತರ ಅಮಲ್ಜಾರಿ ನಂ: 468/97-98ರ ಪ್ರಕಾರ ಸಂಬಂಧಪಟ್ಟ ಪ್ರಾಧಿಕಾರವಾದ ಈ ಕಛೇರಿಯಲ್ಲಿಯೇ ದಾಖಲು ಮಾಡಿ ಅಮಲ್ಜಾರಿ ಪಡೆಯಲಾಗಿದೆ.

ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಬಾಕಿ ಹಣವು ಬ್ಯಾಂಕಿಗೆ ಜಮಾ ಆಗದೇ ಇದ್ದ ಕಾರಣದಿಂದ ಡಿಕ್ರಿಯನ್ನು ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ನಂ: 468: 97-98ರ ಅರ್ಜಿಯನ್ನು ಅದೇ ಬ್ಯಾಂಕಿನ ಮಾರಾಟಾಧಿಕಾರಿ ವಶಕ್ಕೆ ನೀಡಲಾಗಿತ್ತು ಹಾಗೂ ವಸೂಲಿ ಕ್ರಮಕ್ಕಾಗಿ ಸೂಚಿಸಲಾಗಿತ್ತು. ಮಾರಾಟಾಧಿಕಾರಿಯವರು ವಸೂಲಿ ಕ್ರಮ ನಡೆಸಿ ಡಿಕ್ರಿ ಬಾಕಿದಾರನು ಆಧಾರ ಮಾಡಿದ್ದ ಸ್ಥಿರಾಸ್ತಿಯಾದ ಮನೆಯನ್ನು ದಿನಾಂಕ: 24.7.2003 ರಂದು ಬಹಿರಂಗ ಹರಾಜಿಗೆ ಗುರಿಪಡಿಸಲಾಗಿತ್ತು. ಬಿಡ್‌ದಾರರು ಬಾರದೇ ಇರುವುದರಿಂದ ಡಿಕ್ರಿಬಾಕಿದಾರನ ಸ್ಥಿರ ಸ್ವತ್ತನ್ನು ಬ್ಯಾಂಕಿಗೆ ಬರಬೇಕಾದ ಅಸಲು, ಬಡ್ಡಿ, ಸುಸ್ತಿ ಬಡ್ಡಿ, ಡಿಕ್ರಿ ಮತ್ತು ಅಮಲ್ಜಾರಿ ಫೀ ಮತ್ತು ಇತರೆ ವೆಚ್ಚಸೇರಿ

ಹರಾಜು ದಿನಾಂಕಕ್ಕೆ ರೂ. 72550.00 ಬಾಕಿ ಇರುವುದಾಗಿ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು ಸಲ್ಲಿಸಿರುವ ದೃಢೀಕರಣ ಪತ್ರದಿಂದ ತಿಳಿದುಬಂದಿದೆ.

ಷೆಡ್ಯೂಲ್‌ನಲ್ಲಿ ತೋರಿಸಿರುವ ಮನೆ (ಕಟ್ಟಡ) ಸ್ಥಿರಾಸ್ತಿಯನ್ನು ಕಕ್ಷಿದಾರನ ವಾದಿ ಬ್ಯಾಂಕಿಗೆ ವರ್ಗಾಯಿಸಲು ವಿವರವಾದ ನೋಟೀಸನ್ನು ಉಲ್ಲೇಖ (2)ರ ರೀತಿ ನೀಡಲಾಗಿತ್ತು. ಇದರ ಜಾರಿ ಕುರಿತು ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು ವಿವರವಾದ ವರದಿಯನ್ನು ದಿನಾಂಕ: 27.10.2003ರ ತಮ್ಮ ಪತ್ರದಲ್ಲಿ ಮಾಡಿರುತ್ತಾರೆ. ಅಂತಿಮವಾಗಿ ತೀರ್ಪು ಋಣಿದಾರರ ಕಡೆಯ ವಾಸಸ್ಥಳವಾದ ಶಿರಾದಲ್ಲಿರುವ ಮನೆಯ ಬಾಗಿಲಿಗೆ ಚಿಕಟಾಯಿಸಿ ಮಹಜರು ಸಲ್ಲಿಸಿರುತ್ತಾರೆ. ಈ ಪ್ರಕರಣದ ಸ್ಥಿರಾಸ್ತಿ ವರ್ಗಾವಣೆ ಕುರಿತು ಯಾವುದೇ ವಿಧವಾದ ತಕರಾರು ಅರ್ಜಿ ಸಹ ಬಂದಿರುವುದಿಲ್ಲ. ಹಾಗೂ ಅಮಲ್ಜಾರಿ ಹಣವನ್ನು ಕಕ್ಷಿದಾರ ಬ್ಯಾಂಕಿಗೂ ಸಹಕಾರ ಸಂಘಗಳ ನಿಬಂಧನೆಗಳು 38ಎ (3)ರ ರೀತಿ ನೀಡಿದ ನೋಟೀಸ್‌ಗನುಗುಣವಾಗಿ ಸಹ ಮರುಪಾವತಿ ಮಾಡಿರುವುದಿಲ್ಲ. ಆದುದರಿಂದ ಮಾರಾಟಾಧಿಕಾರಿಗಳು ನಿಯಮ 441, ಟೌನ್ ಕೋ-ಆಪರೇಟೀವ್ ಬ್ಯಾಂಕ್ ಲಿ., ಶಿರಾ ಇವರು ಬಿಡ್‌ದಾರರು ಯಾರೂ ಬರಲಿಲ್ಲವಾದ ಕಾರಣದಿಂದ ವಾದಿ ಬ್ಯಾಂಕಿನ ಹೆಸರಿಗೆ ಬಿಡ್ ನಿಲ್ಲಿಸಿರುವುದನ್ನು ಒಪ್ಪಿ ಈ ಕೆಳಕಂಡ ಡಿಕ್ರಿ ಬಾಕಿದಾರನ ಅನ್ವಯ ಭಾಗಶಃ ಸ್ಥಿರ ಸ್ವತ್ತಾದ ಮನೆಯನ್ನು ಡಿಕ್ರಿ ಹೊಂದಿದ ಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಈ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಆದೇಶ ಮಾಡಿ ನೀಡಲಾಗಿದೆ.

**ಆದೇಶ**

**ಸ.ಸಂ.ಸ.ನಿ:33:ಎಬಿಎನ್: ಇಎಕ್ಸ್‌ಎನ್:ಸೇಲ್:48:2003-04 ದಿನಾಂಕ: 27ನೇ ಫೆಬ್ರವರಿ 2004**

ಶ್ರೀ ಟಿ. ಮುರಳಿ ಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 101ಬಿ ರ ಅನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 69:ಸಿಎಲ್‌ಎಂ: 2001 ದಿನಾಂಕ: 21.11.2001ರ ರೀತ್ಯ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಅಮೃತಲಿಂಗಂ ಬಿನ್ ಗೋಪಾಲಸ್ವಾಮಿ ಮೊದಲಿಯಾರ್, ಸಂತೇಪೇಟೆ, ಶಿರಾಟೌನ್‌ನಲ್ಲಿರುವ ಮನೆ ಸ್ಥಿರಾಸ್ತಿ ಖಾನೇಷುಮಾರಿ ನಂ.6323/5509ರ ವಿಸ್ತೀರ್ಣ 15x40 ಅಡಿಗಳು, ಮನೆ ಇದಕ್ಕೆ ಚಕ್ಕುಬಂದಿ ಪೂರ್ವಕ್ಕೆ: ಪಾಪಮ್ಮನವರ ಮನೆ, ಪಶ್ಚಿಮಕ್ಕೆ: ಲೇಟ್ ಯಾಗಪ್ಪನವರ ಮನೆ, ಉತ್ತರಕ್ಕೆ: ರಸ್ತೆ ಮತ್ತು ದಕ್ಷಿಣಕ್ಕೆ: ಮಲ್ಲೇಗೌಡರ ಮನೆ, ಈ ಚಕ್ಕುಬಂದಿ ಮಧ್ಯೆ ಇರುವ ಮನೆಯನ್ನು ವಾದಿ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಆದೇಶ ನೀಡಿರುತ್ತೇನೆ. ಕಾಯಿದೆ ಅನ್ವಯ ನಿಯಮ-8ನ್ನು ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತಾದ ಮನೆಯ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

ಈ ಕಛೇರಿಯ ಮುದ್ರೆ ಮತ್ತು ಸಹಿಯೊಂದಿಗೆ ದಿನಾಂಕ: 27.2.2004 ರಂದು ಈ ಸ್ಥಿರ ಸ್ವತ್ತು ಮನೆಯನ್ನು ವರ್ಗಾವಣೆ ಮಾಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಬಂಧನೆ-38 ಎ ನೋಡಿ)**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರ ಅನ್ವಯ ಪರಭಾರೆಯ ಬಗ್ಗೆ ಪ್ರಮಾಣ ಪತ್ರ**

ತುಮಕೂರು ಜಿಲ್ಲಾ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇದರ ಪ್ರಧಾನ ವ್ಯವಸ್ಥಾಪಕರು ಪಡೆದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 70ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಅಮೃತಲಿಂಗಂ ಬಿನ್ ಗೋಪಾಲಸ್ವಾಮಿ ಮೊದಲಿಯಾರ್ ಸಂತೇಪೇಟೆ, ಶಿರಾ ಇವರ ಸ್ಥಿರ ಸ್ವತ್ತು ಮಾರಾಟದ ಬಗ್ಗೆ ದಿನಾಂಕ: 24.7.2003 ರಂದು ಬಹಿರಂಗ ಹರಾಜು ಇಟ್ಟಿದ್ದು ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಬರಲಿಲ್ಲವಾದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ಮಾರಾಟಾಧಿಕಾರಿಯು ತಿಳಿಸಿರುವುದನ್ನು ನಾನು ಸಮಾಧಾನ ಹೊಂದಿರುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಬಾಧ್ಯತೆ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ಬ್ಯಾಂಕಿನಲ್ಲಿ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಗಳಿಗೆ ಒಳಪಟ್ಟು ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇದಕ್ಕೆ ಒಪ್ಪಿಸತಕ್ಕದ್ದೆಂದು ಸದರಿ ಅಧಿನಿಯಮದ 101ಬಿ ಪ್ರಕರಣದ ಅನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ವರ್ಗಾವಣೆಗೊಂಡ ಸ್ಥಿರ ಸ್ವತ್ತಿನ ಷೆಡ್ಯೂಲ್ ವಿವರ:**

| ಪಟ್ಟಣ | ಖಾನೇಷುಮಾರಿ ನಂ. | ತರಹೆ | ಅಳತೆ | ಚಕ್ಕುಬಂದಿ |
|---|---|---|---|---|
| ಸಂತೇಪೇಟೆ ಶಿರಾಟೌನ್ | 6323/5509 | ಮನೆ | 15x40 ಅಡಿಗಳು | ಪೂರ್ವಕ್ಕೆ : ಪಾಪಮ್ಮನವರ ಮನೆ<br>ಪಶ್ಚಿಮಕ್ಕೆ : ಲೇಟ್ ಯಾಗಪ್ಪನವರ ಮನೆ<br>ಉತ್ತರಕ್ಕೆ : ರಸ್ತೆ<br>ದಕ್ಷಿಣಕ್ಕೆ : ಮಲ್ಲೆಗೌಡರ ಮನೆ |

**ಷರತ್ತು ಮತ್ತು ನಿಯಮಗಳು**

1. ಬ್ಯಾಂಕಿಗೆ ವರ್ಗಮಾಡುವ ಸ್ಥಿರ ಸ್ವತ್ತುಗಳನ್ನು ಸಹಕಾರಿ ಕಾಯಿದೆ ನಿಯಮ 13ರ ರೀತಿ ಬ್ಯಾಂಕು ಸಾಧ್ಯವಾದಷ್ಟು ಬೇಗ ಬ್ಯಾಂಕಿಗೆ ಹಾಗೂ ಬಾಕಿ ಕೊಡಲು ತಪ್ಪಿದವನಿಗೆ ಹೆಚ್ಚು ಅನುಕೂಲವಾಗುವಂತೆ ಆಸ್ತಿಯನ್ನು ಮಾರಾಟ ಮಾಡಲು ಸಾಧ್ಯವಾದಷ್ಟು ಪ್ರಯತ್ನವನ್ನು ಮಾಡತಕ್ಕದ್ದು.
2. ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಆಸ್ತಿಯನ್ನು ಮೂಲತಃ ಹೊಂದಿರುವ ಬಾಕಿ ಕೊಡಲು ತಪ್ಪಿದವನಿಗೆ ಯಾವಾಗಲೂ ಮೊದಲನೇ ಅವಕಾಶವನ್ನು ಕೊಡತಕ್ಕದ್ದು.
3. ಈ ಆಸ್ತಿಯ ವರ್ಗಾವಣೆಯ ನಂತರ ಪುನಃ ಮಾರಾಟ ಮಾಡಿದಾಗ ಬರಬಹುದಾದ ಬಾಗಶಃ ಹಣವನ್ನು ಬ್ಯಾಂಕಿಗೆ ಜಮಾ ಖರ್ಚು ಮಾಡಿಕೊಳ್ಳತಕ್ಕದ್ದು. ಆದ್ದರಿಂದ ಈ ಆಸ್ತಿಯ ವರ್ಗಾವಣೆಯನ್ನು ಬ್ಯಾಂಕು ಪಡೆದಿರುವ ಡಿಕ್ರಿ ಮೊಬಲಗಿನ ಭಾಗಶಃ ಹಣದ ವಸೂಲಾತಿಗಾಗಿ ಈ ಆದೇಶ ನೀಡಲಾಗಿದೆ.

ಪಿ.ಆರ್.352 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ-ಉಪ-ವಿಭಾಗ, ಮಧುಗಿರಿ,**
**ತುಮಕೂರು ಜಿಲ್ಲೆ ಇವರ ನಡವಳಿಕೆಗಳು**

**ವಿಷಯ :** ಪಾವರ್ತಮ್ಮ ಕೋಂ ಆರ್. ಶಿವಣ್ಣ ಜ್ಯೋತಿನಗರ, ಶಿರಾ ಇವರ ಸ್ಥಿರಾಸ್ತಿಯಾದ ನಿವೇಶನವನ್ನು ದಿನಾಂಕ: 24.7.2003 ರಂದು ನಡೆದ ಬಹಿರಂಗ ಹರಾಜಿನಲ್ಲಿ ಖರೀದಿಸಿರುವ ಸ್ಥಿರ ಸ್ವತ್ತನ್ನು ಟೌನ್ ಸಹಕಾರ ಬ್ಯಾಂಕ್ ನಿ., ಶಿರಾ, ಈ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ :**
1. ಮಾರಾಟಾಧಿಕಾರಿ ನಿಯಮ 441 ಟೌನ್ ಕೋ ಆಪರೇಟಿವ್ ಬ್ಯಾಂಕ್ ಲಿ., ಶಿರಾ, ಇವರ ಪ್ರಸ್ತಾವನೆ ಪತ್ರದ ನಂ. ಟಿ.ಸಿ. ಬ್ಯಾಂಕ್-ಶಿರಾ: ಹರಾಜು-ಸ್ಥಿರಾಸ್ತಿ/2003-04 ದಿನಾಂಕ: 25.7.2003.
2. ಈ ಕಛೇರಿ ಕೆಳಕಂಡ ಸಮಸಂಖ್ಯೆ ಪತ್ರದ ದಿನಾಂಕ: 23.10.2003
3. ಬ್ಯಾಂಕಿನ ವರದಿ ಪತ್ರದ ನಂ: ಟಿ.ಸಿ.ಬಿ-ಶಿರಾ:ಸೇಲ್ 140ಸಿ:2003-04 ದಿನಾಂಕ: 8.1.2004

**ಪ್ರಸ್ತಾವನೆ:**

ತುಮಕೂರು ಜಿಲ್ಲಾ ಶಿರಾಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕ್ ಕರ್ನಾಟಕ ಸಹಕಾರ ಕಾಯಿದೆ 1959 ನಿಯಮ 1960 ರ ಅನ್ವಯ ನೋಂದಾವಣೆಯಾಗಿದ್ದು, ನೋಂದಣಿಗೊಂಡ ಉಪನಿಯಮಗಳ ಅನ್ವಯ ಕಾರ್ಯನಿರ್ವಹಿಸುತ್ತಿದೆ. ಈ ಸಹಕಾರ ಬ್ಯಾಂಕಿನಲ್ಲಿ ಶ್ರೀಮತಿ ಪಾರ್ವತಮ್ಮ ಕೋಂ ಆರ್. ಶಿವಣ್ಣ, ಜ್ಯೋತಿನಗರ, ಶಿರಾಟೌನ್ ಇವರು ಸಾಲ ಪಡೆದಿದ್ದು, ಅಸಲು, ಬಡ್ಡಿ, ಸುಸ್ತಿಬಡ್ಡಿ ಇತರೆ ಖರ್ಚು ಒಟ್ಟು ರೂ.44015-00 ಸುಸ್ತಿಯಾಗಿದ್ದು ವಸೂಲಿಗಾಗಿ ಬ್ಯಾಂಕ್ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯಿದೆ 1959 ಕಲಂ 70ರ ಅಡಿಯಲ್ಲಿ ವಿವಾದ ಸಂಖ್ಯೆ: ಜೆ.ಆರ್.ಬಿ.941:96-97ರ ರೀತ್ಯ ದಾವೆಯನ್ನು ಹೂಡಿದ್ದು ಇದರ ತೀರ್ಪು ದಿನಾಂಕ: 21.12.1996 ರಂದು ಹೊರಬಿದ್ದಿರುತ್ತದೆ. ನಂತರ ಅಮಲ್ಜಾರಿ ನಂ:453/97-98 ದಿನಾಂಕ: 24.4.1997ರ ಪ್ರಕಾರ ಸಂಬಂಧಪಟ್ಟ ಪ್ರಾಧಿಕಾರವಾದ ಈ ಕಛೇರಿಯಲ್ಲಿಯೇ ದಾಖಲು ಮಾಡಿ ಅಮಲ್ಜಾರಿ ಪಡೆಯಲಾಗಿದೆ.

ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿ ಬಾಕಿ ಹಣವು ಬ್ಯಾಂಕಿಗೆ ಜಮಾ ಆಗದೇ ಇದ್ದ ಕಾರಣದಿಂದ ಡಿಕ್ರಿಯನ್ನು ವಸೂಲಿ ಕ್ರಮಕ್ಕಾಗಿ ಅಮಲ್ಜಾರಿ ನಂ: 453: 97-98ರ ಅರ್ಜಿಯನ್ನು ಅದೇ ಬ್ಯಾಂಕಿನ ಮಾರಾಟಾಧಿಕಾರಿ ವಶಕ್ಕೆ ನೀಡಲಾಗಿತ್ತು ಹಾಗೂ ವಸೂಲಿ ಕ್ರಮಕ್ಕಾಗಿ ಸೂಚಿಸಲಾಗಿತ್ತು. ಮಾರಾಟಾಧಿಕಾರಿಯವರು ವಸೂಲಿ ಕ್ರಮ ನಡೆಸಿ ಡಿಕ್ರಿ ಬಾಕಿದಾರನು ಆಧಾರ ಮಾಡಿದ್ದ ಸ್ಥಿರಾಸ್ತಿಯಾದ ನಿವೇಶನವನ್ನು ದಿನಾಂಕ: 24.7.2003 ರಂದು ಬಹಿರಂಗ ಹರಾಜಿಗೆ ಗುರಿಪಡಿಸಲಾಗಿತ್ತು. ಬಿಡ್‌ದಾರರು ಬಾರದೇ ಇರುವುದರಿಂದ ಡಿಕ್ರಿಬಾಕಿದಾರನ ಸ್ಥಿರ ಸ್ವತ್ತನ್ನು ಬ್ಯಾಂಕಿಗೆ ಬರಬೇಕಾದ ಅಸಲು, ಬಡ್ಡಿ, ಸುಸ್ತಿ ಬಡ್ಡಿ, ಡಿಕ್ರಿ ಮತ್ತು ಅಮಲ್ಜಾರಿ ಫೀ ಮತ್ತು ಇತರೆ ವೆಚ್ಚಸೇರಿ ಹರಾಜು ದಿನಾಂಕಕ್ಕೆ ರೂ. 1,09,030.00 ಬಾಕಿ ಇರುವುದಾಗಿ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು ಸಲ್ಲಿಸಿರುವ ದೃಢೀಕರಣ ಪತ್ರದಿಂದ ತಿಳಿದುಬಂದಿದೆ.

ಷೆಡ್ಯೂಲ್‌ನಲ್ಲಿ ತೋರಿಸಿರುವ ನಿವೇಶನ ಸ್ಥಿರಾಸ್ತಿಯನ್ನು ಕಕ್ಷಿದಾರನ ವಾದಿ ಬ್ಯಾಂಕಿಗೆ ವರ್ಗಾಯಿಸಲು ವಿವರವಾದ ನೋಟೀಸನ್ನು ಉಲ್ಲೇಖ (2)ರ ರೀತಿ ನೀಡಲಾಗಿತ್ತು. ಈ ನೋಟೀಸನ್ನು ಪಾರ್ವತಮ್ಮನವರ ಯಜಮಾನರಾದ ಶ್ರೀ ಆರ್. ಶಿವಣ್ಣನವರು ಸ್ವೀಕರಿಸಿರುತ್ತಾರೆ. ಆದರೂ ಹಣ ಮರುಪಾವತಿ ಮಾಡಿರುವುದಿಲ್ಲವೆಂತಲೂ ಹಾಗೂ ಯಾವುದೇ ಸಂಕರ್ಪವನ್ನು ಸಹ ಮಾಡಿರುವುದಿಲ್ಲವೆಂತಲೂ ಉಲ್ಲೇಖ (3)ರ ರೀತಿ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು ವರದಿ ಮಾಡಿರುತ್ತಾರೆ. ಆದ್ದರಿಂದ ಮಾರಾಟಾಧಿಕಾರಿಗಳು ನಿಯಮ-441, ಟೌನ್ ಕೋ-ಆಪರೇಟೀವ್ ಬ್ಯಾಂಕ್ ಲಿ., ಶಿರಾ ಇವರು ಬಿಡ್‌ದಾರರು ಯಾರೂ ಬರಲಿಲ್ಲವಾದ ಕಾರಣದಿಂದ ವಾದಿ ಬ್ಯಾಂಕಿನ ಹೆಸರಿಗೆ ಬಿಡ್ ನಿಲ್ಲಿಸಿರುವುದನ್ನು ಒಪ್ಪಿ ಈ ಕೆಳಕಂಡ ಡಿಕ್ರಿ ಬಾಕಿದಾರನ ಅನ್ವಯ ಭಾಗಶಃ ಸ್ಥಿರ ಸ್ವತ್ತನ್ನು ಡಿಕ್ರಿ ಹೊಂದಿದ ಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇವರ ಹೆಸರಿಗೆ ವರ್ಗಾವಣೆ ಆದೇಶ ಮಾಡಿ ನೀಡಲಾಗಿದೆ.

**ಆದೇಶ**

**ಸ.ಸಂ.ಸ.ನಿ:33:ಎಬಿಎನ್: ಇಎಕ್ಸ್ಎನ್:ಸೇಲ್:47:2003-04 ದಿನಾಂಕ: 27ನೇ ಫೆಬ್ರವರಿ 2004**

ಶ್ರೀ ಟಿ. ಮುರಳಿ ಕೃಷ್ಣಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 101ಬಿ ರ ಅನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ

ಸಿಎಂಡಬ್ಲ್ಯೂ 69:ಸಿಎಲ್ಎಂ: 2001 ದಿನಾಂಕ: 21.11.2001ರ ರೀತ್ಯ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀಮತಿ ಪಾರ್ವತಮ್ಮ ಕೋಂ ಆರ್. ಶಿವಣ್ಣ, ಜ್ಯೋತಿನಗರ, ಶಿರಾ ಇವರ ನಿವೇಶನ, ಮಾರುತಿನಗರ, ಶಿರಾಟೌನ್‌ನಲ್ಲಿರುವ ಸ್ಥಿರಾಸ್ತಿ ಮುನ್ಸಿಪಲ್ ನಂ.10486/17ರ ವಿಸ್ತೀರ್ಣ 40x31 ಅಡಿಗಳು, ಇದಕ್ಕೆ ಚಕ್ಕುಬಂದಿ ಪೂರ್ವಕ್ಕೆ: ರಸ್ತೆ ಪಶ್ಚಿಮಕ್ಕೆ: ಸ್ವಂತ ಸೈಟು, ಉತ್ತರಕ್ಕೆ: ಇಂದಿರಾನಾರಾಯಣ ಸೈಟು, ದಕ್ಷಿಣಕ್ಕೆ: ಆರ್. ರತ್ನಮ್ಮನ ಸೈಟು ಈ ಚಕ್ಕುಬಂದಿ ಮಧ್ಯೆ ಇರುವ ನಿವೇಶನವನ್ನು ವಾದಿ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಆದೇಶ ನೀಡಿರುತ್ತೇನೆ. ಕಾಯಿದೆ ಅನ್ವಯ ನಿಯಮ-8ನ್ನು ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತಾದ ನಿವೇಶನದ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

ಈ ಕಛೇರಿಯ ಮುದ್ರೆ ಮತ್ತು ಸಹಿಯೊಂದಿಗೆ ದಿನಾಂಕ: 27.2.2004 ರಂದು ಈ ಸ್ಥಿರ ಸ್ವತ್ತನ್ನು ವರ್ಗಾವಣೆ ಮಾಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಬಂಧನೆ-38 ಎ ನೋಡಿ)**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರ ಅನ್ವಯ ಪರಭಾರೆಯ ಬಗ್ಗೆ ಪ್ರಮಾಣ ಪತ್ರ**

ತುಮಕೂರು ಜಿಲ್ಲಾ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇದರ ಪ್ರಧಾನ ವ್ಯವಸ್ಥಾಪಕರು ಪಡೆದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 70ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀಮತಿ ಪಾರ್ವತಮ್ಮ ಕೋಂ ಆರ್.ಶಿವಣ್ಣ, ಜ್ಯೋತಿನಗರ, ಶಿರಾ ಇವರ ಸ್ಥಿರ ಸ್ವತ್ತು ಮಾರಾಟದ ಬಗ್ಗೆ ದಿನಾಂಕ: 24.7.2003 ರಂದು ಬಹಿರಂಗ ಹರಾಜು ಇಟ್ಟಿದ್ದು ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಬರಲಿಲ್ಲವಾದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ಮಾರಾಟಾಧಿಕಾರಿಯು ತಿಳಿಸಿರುವುದನ್ನು ನಾನು ಸಮಾಧಾನ ಹೊಂದಿರುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಬಾಧ್ಯತೆ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ಬ್ಯಾಂಕಿನಲ್ಲಿ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಗಳಿಗೆ ಒಳಪಟ್ಟು ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ತುಮಕೂರು ಜಿಲ್ಲೆ ಇದಕ್ಕೆ ಒಪ್ಪಿಸತಕ್ಕದ್ದೆಂದು ಸದರಿ ಅಧಿನಿಯಮದ 101ಬಿ ಪ್ರಕರಣದ ಅನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ವರ್ಗಾವಣೆಗೊಂಡ ಸ್ಥಿರ ಸ್ವತ್ತಿನ ಷೆಡ್ಯೂಲ್ ವಿವರ:**

| ಪಟ್ಟಣ | ಖಾನೇಷುಮಾರಿ ನಂ. | ತರಹೆ | ಅಳತೆ | ಚಕ್ಕುಬಂದಿ |
|---|---|---|---|---|
| ಮಾರುತಿನಗರ ಶಿರಾಟೌನ್ | 10486/17 | ನಿವೇಶನ | 40x31 ಅಡಿಗಳು | ಪೂರ್ವಕ್ಕೆ : ರಸ್ತೆ<br>ಪಶ್ಚಿಮಕ್ಕೆ : ಸ್ವಂತ ಸೈಟು<br>ಉತ್ತರಕ್ಕೆ : ಇಂದಿರಾ ನಾರಾಯಣ ಸೈಟು<br>ದಕ್ಷಿಣಕ್ಕೆ : ಆರ್. ರತ್ನಮ್ಮನ ಸೈಟು |

**ಷರತ್ತು ಮತ್ತು ನಿಯಮಗಳು**

1. ಬ್ಯಾಂಕಿಗೆ ವರ್ಗಮಾಡುವ ಸ್ಥಿರ ಸ್ವತ್ತುಗಳನ್ನು ಸಹಕಾರಿ ಕಾಯಿದೆ ನಿಯಮ 13ರ ರೀತಿ ಬ್ಯಾಂಕು ಸಾಧ್ಯವಾದಷ್ಟು ಬೇಗ ಬ್ಯಾಂಕಿಗೆ ಹಾಗೂ ಬಾಕಿ ಕೊಡಲು ತಪ್ಪಿದವನಿಗೆ ಹೆಚ್ಚು ಅನುಕೂಲವಾಗುವಂತೆ ಆಸ್ತಿಯನ್ನು ಮಾರಾಟ ಮಾಡಲು ಸಾಧ್ಯವಾದಷ್ಟು ಪ್ರಯತ್ನವನ್ನು ಮಾಡತಕ್ಕದ್ದು.
2. ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಆಸ್ತಿಯನ್ನು ಮೂಲತಃ ಹೊಂದಿರುವ ಬಾಕಿ ಕೊಡಲು ತಪ್ಪಿದವನಿಗೆ ಯಾವಾಗಲೂ ಮೊದಲನೇ ಅವಕಾಶವನ್ನು ಕೊಡತಕ್ಕದ್ದು.
3. ಈ ಆಸ್ತಿಯ ವರ್ಗಾವಣೆಯ ನಂತರ ಪುನಃ ಮಾರಾಟ ಮಾಡಿದಾಗ ಬರಬಹುದಾದ ಬಾಗಶಃ ಹಣವನ್ನು ಬ್ಯಾಂಕಿಗೆ ಜಮಾ ಖರ್ಚು ಮಾಡಿಕೊಳ್ಳತಕ್ಕದ್ದು. ಆದ್ದರಿಂದ ಈ ಆಸ್ತಿಯ ವರ್ಗಾವಣೆಯನ್ನು ಬ್ಯಾಂಕು ಪಡೆದಿರುವ ಡಿಕ್ರಿ ಮೊಬಲಗಿನ ಭಾಗಶಃ ಹಣದ ವಸೂಲಾತಿಗಾಗಿ ಈ ಆದೇಶ ನಿಡಲಾಗಿದೆ.

ಪಿ.ಆರ್.353 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ ಇವರ ಕಾರ್ಯವಾಹಿಗಳು**

**ವಿಷಯ :** ಗುರುರೇವಣ್ಣ ಸಿದ್ದೇಶ್ವರ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಶಿರಾ ಇದನ್ನು ಪುನಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಸಮಾಪನಾ ಆದೇಶ ಸಂ.ಡಿಆರ್‌ಟಿ:ಎಲ್‌ಕ್ಯೂಡಿ:105:ಡಿಎಲ್ಎಸ್4:2001-02 ದಿನಾಂಕ: 1.5.2002
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಪತ್ರ ಸಂ: ಸನಿ-33: ಎಂಕೆಟಿ: ಸಮಾಪನೆ:140:2003-04 ದಿನಾಂಕ:12.2.2004

**ಪ್ರಸ್ತಾವನೆ:**

ತುಮಕೂರು ಜಿಲ್ಲಾ ಶ್ರೀ ಗುರುರೇವಣ್ಣ ಸಿದ್ದೇಶ್ವರ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಶಿರಾ ಈ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದ್ದರಿಂದ ಉಲ್ಲೇಖ (1)ರ ರೀತ್ಯಾ ಈ ಕಛೇರಿಯ ಆದೇಶದ ಮೇರೆಗೆ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿರವರು ತಿಳಿಸಿರುವಂತೆ

ಸಮಾಪನಾಧಿಕಾರಿ ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ ಶಿರಾ ಇವರ ದಿನಾಂಕ: 26.12.2003ರ ಸಭೆಯ ನಡವಳಿಕೆಯ ತೀರ್ಮಾನದಂತೆ ನೇಕಾರರ ಹಿತ ದೃಷ್ಟಿಯಿಂದ ಹಾಗೂ ಸದಸ್ಯರುಗಳು ಸಂಘವನ್ನು ಪುನಃಶ್ಚೇತನಗೊಳಿಸಲು ಆಸಕ್ತರಾಗಿರುವುದರಿಂದ ಈ ಸಂಘವನ್ನು ಪುನಃಶ್ಚೇತನಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿರವರು ಕೋರಿರುತ್ತಾರೆ. ಪ್ರಯುಕ್ತ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

**ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:105:ಡಿಎಲ್‌ಎಸ್:4:2001-02 ದಿನಾಂಕ: 25ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಗಮನಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ72(3) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಶ್ರೀ ಗುರುರೇವಣ್ಣ ಸಿದ್ದೇಶ್ವರ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ, ಶಿರಾ, ಸಂಘದ ಸದಸ್ಯರ ಮತ್ತು ಸಾರ್ವಜನಿಕರ ಹಿತದೃಷ್ಟಿಯಿಂದ ಈ ಸಂಘವು ತನ್ನ ಕಾರ್ಯ ಚಟುವಟಿಕೆಗಳನ್ನು ಪುನರಾರಂಭಿಸಿ ಉತ್ತಮವಾಗಿ ಕಾರ್ಯನಿರ್ವಹಿಸುವಂತೆ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ತಿಳಿಸಿ ಉಲ್ಲೇಖ (1)ರ ಸಮಾಪನಾ ಆದೇಶ ರದ್ದುಪಡಿಸಿ ಸಂಘವನ್ನು ಪುನಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 25.2.2003 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿಯ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮ್ಮದ್ ಸಲೀಂ**

ಪಿ.ಆರ್. 354 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ :** ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹುಲ್ಲೇನಹಳ್ಳಿ, ತಿಪಟೂರು ತಾಲ್ಲೂಕು ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ :**

1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಉಪವಿಭಾಗ, ತಿಪಟೂರು ಇವರ ಪತ್ರ ಸಂಖ್ಯೆ: ಸನಿ-34:ಎಲ್‌ಕ್ಯೂಡಿ:41:98-99 ದಿನಾಂಕ: 10.9.98
2. ಈ ಕಛೇರಿಯ ಪತ್ರ ಸಂಖ್ಯೆ: ಡಿಆರ್‌ಡಿ:ಎಲ್‌ಕ್ಯೂಡಿ:100:98-99.
3. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:100:98-99 ದಿನಾಂಕ: 29.9.98.
4. ಸಮಾಪನಾಧಿಕಾರಿ ಇವರ ಪತ್ರ ದಿನಾಂಕ: 12.2.99
5. ಈ ಕಛೇರಿಯ ಪತ್ರ ಸಂಖ್ಯೆ: ಡಿಆರ್‌ಟಿ:ಡಿಎಲ್‌ಎಸ್:100:98-99 ದಿನಾಂಕ: 1.9.99.
6. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಇವರ ಪತ್ರ ಸಂಖ್ಯೆ: ಸನಿ-34 ಎಂಕೆಟಿ: ಡಿಎಲ್‌ಎಸ್: 41: 99-2000 ದಿನಾಂಕ: 14.01.2000
7. ಡಿಆರ್‌ಟಿ:ಡಿಎಲ್‌ಎಸ್:100:98-99 ದಿನಾಂಕ:25.9.2000
8. ಸನಿ-34:ಎಂಕೆಟಿ:ಡಿಎಲ್‌ಎಸ್:41:99-2000 ದಿನಾಂಕ: 1.1.01.
9. ಡಿಆರ್‌ಟಿ:ಎಲ್‌ಕ್ಯೂಡಿ:100:98-99 ದಿನಾಂಕ: 8.3.01.
10. ಈ ಕಛೇರಿಯ ಸಮಾಪನಾಧಿಕಾರಿಯವರ ಬದಲಿ ಆದೇಶ ಸಂಖ್ಯೆ: ಡಿಆರ್‌ಟಿ: ಎಲ್‌ಕ್ಯೂಡಿ:100:98-99 ದಿನಾಂಕ: 30.4.02
11. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಇವರ ಪತ್ರ ಸಂಖ್ಯೆ:ಸನಿ-34:ಎಲ್‌ಕ್ಯೂಡಿ:41: 99-2000 ದಿನಾಂಕ: 12.11.2000.
12. ಈ ಕಛೇರಿಯ ಪತ್ರ ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:100: 98-99 ದಿನಾಂಕ: 27.11.03.
13. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಇವರ ಪತ್ರ ಸಂಖ್ಯೆ: ಸನಿ-34:ಎಲ್‌ಕ್ಯೂಡಿ:41: 98-99 ದಿನಾಂಕ: 24.1.2004.

**ಪ್ರಸ್ತಾವನೆ:**

ತಿಪಟೂರು ತಾಲ್ಲೂಕು ಹುಲ್ಲೇನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹುಲ್ಲೇನಹಳ್ಳಿ ಈ ಸಂಘವು ನೋಂದಣಿ ಸಂಖ್ಯೆ: ಎಆರ್‌ಟಿ:ಎಂಪಿಸಿಎಸ್: ಆರ್‌ಸಿಎಸ್: 4404:82-83 ದಿನಾಂಕ: 31.7.82 ರಲ್ಲಿ ನೋಂದಣಿಯಾಗಿದ್ದು ಸದರಿ ಸಂಘವು ಕಾರ್ಯ ಚಟುವಟಿಕೆ ನಡೆಸದೇ ಸ್ಥಗಿತಗೊಂಡಿದ್ದರ ಮೇರೆಗೆ ಸಹಕಾರ ಸಂಘಗಳ ನಿರೀಕ್ಷಕರು, ತಿಪಟೂರು ಇವರು ಮಾಹಿತಿ ನೀಡಿದ್ದು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಇವರು ಉಲ್ಲೇಖ (1)ರ ಪತ್ರದಲ್ಲಿ ದಿನಾಂಕ: 10.9.98ರಲ್ಲಿ ಪ್ರಸ್ತಾವನೆಗೆ ಸಲ್ಲಿಸಿದ್ದರು. ಪ್ರಯುಕ್ತ ಈ ಕಛೇರಿಯ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸ್ ನೀಡಿ ಆಕ್ಷೇಪಣೆ ಸಲ್ಲಿಸಲು ಅವಕಾಶ ನೀಡಲಾಗಿತ್ತು. ತತ್ಸಂಬಂಧವಾಗಿ ಯಾವುದೇ ಸಮಾಜಾಯಿಷಿಯಾಗಲಿ, ತಕರಾರುಗಳಾಗಲಿ ಆಕ್ಷೇಪಣೆ ಬಾರದ್ದರಿಂದ ಉಲ್ಲೇಖ(3)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಂಘಕ್ಕೆ ಡೈರಿ ವಿಸ್ತರಣಾಧಿಕಾರಿ ತಿಪಟೂರು ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಸಂಘದ ಆಸ್ತಿ-ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು. ಉಲ್ಲೇಖ (4)ರಲ್ಲಿ ಸಮಾಪನಾಧಿಕಾರಿಗಳು ಸಂಘವನ್ನು ಪುನಶ್ಚೇತನಗೊಳಿಸುವ ಬಗ್ಗೆ ಮನವಿ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಈ ಬಗ್ಗೆ ಉಲ್ಲೇಖ (5)ರಲ್ಲಿ ವ್ಯವಸ್ಥಾಪಕ ನಿರ್ದೇಶಕರು ತುಮಕೂರು ಜಿಲ್ಲಾ ಹಾಲು ಒಕ್ಕೂಟ ಇವರ ಅಭಿಪ್ರಾಯ ಪಡೆದು

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 27.02.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 382 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:08-2004**

**ಅರ್ಜಿದಾರರು:**

1. ಮಂಜುಳ, 26 ವರ್ಷ ಕೋಂ ಲೇಟ್ ವೆಂಕಟೇಶ್
2. ಕೆ.ವಿ. ವಿಶ್ವನಾಥ್ ಬಿನ್ ಲೇಟ್ ವೆಂಕಟೇಶ್
3. ವಿ. ಆಶಾರಾಣಿ, 14ವರ್ಷ ತಂದೆ: ಲೇಟ್ ವೆಂಕಟೇಶ್
4. ವಿ. ಗೌತಮಿ, 9 ವರ್ಷ ತಂದೆ: ಲೇಟ್ ವೆಂಕಟೇಶ್.
5. ವಿ. ಉಷಾ, 11 ವರ್ಷ ತಂದೆ: ಲೇಟ್ ವೆಂಕಟೇಶ್
6. ಉತ್ತನಲಮ್ಮ 80 ವರ್ಷ, ಕೋಂ ಲೇಟ್ ರಾಮಯ್ಯ ಕೆ.ಜಿ.ಹಳ್ಳಿ, ಟೇಕಲ್ ಹೋಬಳಿ, ಮಾಲೂರು ತಾಲ್ಲೂಕು.

**ವಿರುದ್ಧ** **ಪ್ರತಿವಾದಿಗಳು:**

1. ಹೆಚ್. ಎನ್. ನಾಗರಾಜ ಬಿನ್ ಬಿ.ಎಂ. ನಂಜುಂಡಪ್ಪ ಹುಣಸಿಕೋಟೆ ವಿಲೇಜ್, ಕೊಂಡಶೆಟ್ಟಿಹಳ್ಳಿ ಅಂಚೆ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿಮಿಟೆಡ್, ಬಾಗಲೂರು ಮಾನ್ಶನ್, ದೊಡ್ಡಪೇಟೆ, 2ನೇ ಮಹಡಿ, ಕೋಲಾರ.

**ಅಧಿಸೂಚನೆ**

ಅರ್ಜಿದಾರರಾದ ಮಂಜುಳ ಅವರು ತಮ್ಮ ಗಂಡ: ಮಗನಾದ ಶ್ರೀ ವೆಂಕಟೇಶ್ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಹೆಚ್.ಎನ್. ನಾಗರಾಜ ರವರ ಬಳಿ ಚಾಲಕ: ಕ್ಲೀನರ್: ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 24.09.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 27.2.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 383 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:07-2004**

**ಅರ್ಜಿದಾರರು:**

1. ಸರಸ್ವತಮ್ಮ 23 ವರ್ಷ ಕೋಂ ಲೇಟ್ ಕೃಷ್ಣಪ್ಪ
2. ಅಲೆಟ್ಟಿ ರಾಜಪ್ಪ, 55 ವರ್ಷ ಬಿನ್ ಅಡೆಪ್ಪ
3. ಅಲೆಟ್ಟಿ ಅಧೀಕಮ್ಮ 50 ವರ್ಷ ಕೋಂ ಅಲೆಟ್ಟಿ ರಾಜಪ್ಪ ಬೊಮ್ಮಯ್ಯಗಾರಿ ಪಲ್ಲಿ, ಗೂಳ್ಳೂರು ಹೋಬಳಿ, ತಿಮ್ಮಮಪಲ್ಲಿ ಗ್ರಾಮ ಪಂಚಾಯತ್, ಚೆಂಚುರಾಯನಪಲ್ಲಿ ಅಂಚೆ, ಬಾಗೇಪಲ್ಲಿ ತಾಲ್ಲೂಕು, ಕೋಲಾರ ಜಿಲ್ಲೆ.

**ವಿರುದ್ಧ** **ಪ್ರತಿವಾದಿಗಳು:**

1. ಟಿ. ನಂದಿ ರೆಡ್ಡಿ ಬಿನ್ ಟಿ. ನಾರಾಯಣರೆಡ್ಡಿ ರಾಚವಾರಿಪಲ್ಲಿ, ತಾನಕಲ್ಲು ಚುಂಡಲಂ, ಅನಂತಪುರ ಜಿಲ್ಲೆ, ಆಂಧ್ರ ಪ್ರದೇಶ.
2. ದಿ ನ್ಯಾಷನಲ್ ಇನ್‌ಶೂರೆನ್ಸ್ ಕಂ. ಲಿ., ಬ್ರಾಂಚ್ ಆಫೀಸ್, ನಂ. 1092:2, ಬಿಂದು, ಡೊಂ ಲೈಟ್ ಸರ್ಕಲ್ ಹತ್ತಿರ, ಕೋಲಾರ.

**ಅಧಿಸೂಚನೆ**

ಅರ್ಜಿದಾರರಾದ ಸರಸ್ವತಮ್ಮ ಅವರು ತಮ್ಮ ಗಂಡ: ಮಗನಾದ ಶ್ರೀ ಕೃಷ್ಣಪ್ಪ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಟಿ. ನಂದಿರೆಡ್ಡಿ ರವರ ಬಳಿ ಚಾಲಕ: ಕ್ಲೀನರ್: ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 6.9.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ

ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 27.2.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 384 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:06-2004**

**ಅರ್ಜಿದಾರರು:**

1. ಶ್ರೀಮತಿ ಶಬೀನಾ, 24 ವರ್ಷ ಕೋಂ ಜಿಯಾವುಲ್ಲಾ
2. ಖಾನ್‌ಸಾಬ್, 5 ವರ್ಷ ಬಿನ್ ಜಿಯಾವುಲ್ಲಾ
3. ಫಕ್ರುದ್ದೀನ್, 2 ವರ್ಷ ಬಿನ್ ಜಿಯಾವುಲ್ಲಾ
4. ರಸೂಲ್ ಬೀ ಕೋಂ ರೆಹಮಾನ್ ಸಾಬ್ ಅಲಿಯಾಸ್ ಕಾನಿಂ ಸಾಬ್, 52 ವರ್ಷ
5. ಜಿನಾಬಿ ಕೋಂ ಹುಸೇನ್ ಸಾಬ್, 68 ವರ್ಷ ಸೋಮೇಶ್ವರ ವಿಲೇಜ್, ಸೋಮನಹಳ್ಳಿ ಹೋಬಳಿ, ಗುಡಿಬಂಡೆ ತಾಲ್ಲೂಕು, ಕೋಲಾರ ಜಿಲ್ಲೆ.

**ವಿರುದ್ಧ ಪ್ರತಿವಾದಿಗಳು:**

1. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಹೆಚ್‌ಪಿಟಿ ಓ, ಜೋಲಮಂಡಲಂ ಇನ್ವೆಸ್ಟ್‌ಮೆಂಟ್ ಅಂಡ್ ಫೈನಾನ್ಸ್ ಕಂ. ಲಿ., ಟೈಂ ಹೌಸ್, ನಂ. 28. ರಜಾಜಿ ಸಲಾಹಿ, ಚೆನ್ನೈ-600 001.
2. ಮ: ಪ್ರಭ ಕೋಂ ಪ್ರಭಾಕರ್, ಸೋಮೇಶ್ವರ (ವೈಯಾ) ಪೆರೆಸಂದ್ರ, ಗುಡಿಬಂಡೆ ತಾಲ್ಲೂಕು ಕೋಲಾರ ಜಿಲ್ಲೆ.
3. ದಿ ಓರಿಯಂಟಲ್ ಇನ್‌ಸೂರೆನ್ಸ್ ಕಂ. ಲಿ. ನಂ. 20 ಚೊಕ್ಕಸಂದ್ರ, ಬೆಂಗಳೂರು-57
4. ಶ್ರೀಮತಿ ಸುಭದ್ರ ರವಿಚಂದ್ರನ್ ಕೋಂ ರವಿಚಂದ್ರನ್ ನಂ.51:3, ಮಾಡಲ್ ಹೌಸ್ ಬ್ಲಾಕ್ ಬೆಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಶಬೀನಾ ಅವರು ತಮ್ಮ ಗಂಡ: ಮಗನಾದ ಶ್ರೀ ಜಿಯಾವುಲ್ಲಾ ಅವರು 2ನೇ ಪ್ರತಿವಾದಿ ಶ್ರೀ:ಶ್ರೀಮತಿ ಪ್ರಭ ಕೋಂ ಪ್ರಭಾಕರ್ ರವರ ಬಳಿ ಚಾಲಕ: ಕ್ಲೀನರ್: ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 20.9.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 27.2.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 385 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:05-2004**

**ಅರ್ಜಿದಾರರು:**

1. ಲಕ್ಷ್ಮಮ್ಮ ಕೋಂ ಲೇಟ್ ಚಂದ್ರಪ್ಪ
2. ಆರತಿ, ತಂದೆ: ಲೇಟ್ ಚಂದ್ರಪ್ಪ
3. ಅಶೋಕ ಬಿನ್ ಲೇಟ್ ಚಂದ್ರಪ್ಪ
4. ಅರವಿಂದ ಬಿನ್ ಲೇಟ್ ಚಂದ್ರಪ್ಪ
5. ಮುನಿಯಪ್ಪ ಬಿನ್ ಧೋರಪ್ಪ
6. ಕಾಳಮ್ಮ ಕೋಂ ಮುನಿಯಪ್ಪ ದಾಸರಹಳ್ಳಿ ವಿಲೇಜ್, ಟೇಕಲ್ ಹೋಬಳಿ, ಮಾಲೂರು ತಾ: ಕೋಲಾರ ಜಿಲ್ಲೆ.

**ವಿರುದ್ಧ ಪ್ರತಿವಾದಿಗಳು:**

1. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿಮಿಟೆಡ್ ಬಾಗಲೂರು ಮ್ಯಾನ್‌ಷನ್, 2ನೇ ಮಹಡಿ, ದೊಡ್ಡಪೇಟೆ, ಕೋಲಾರ.
2. ಹೆಚ್.ಎಸ್. ನಾಗರಾಜ್ ಬಿನ್ ಬಿ.ಎಸ್. ನಂಜುಂಡಪ್ಪ ಹೂಣಸಿಕೋಟೆ ವಿಲೇಜ್, ಕೊಂಡಶೆಟ್ಟಿಹಳ್ಳಿ ಅಂಚೆ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ.

**ಅಧಿಸೂಚನೆ**

ಅರ್ಜಿದಾರರಾದ ಲಕ್ಷ್ಮಮ್ಮ ಕೋಂ ಲೇಟ್ ಚಂದ್ರಪ್ಪ ಅವರು ತಮ್ಮ ಗಂಡ: ಮಗನಾದ ಶ್ರೀ ಚಂದ್ರಪ್ಪ ಅವರು 2ನೇ ಪ್ರತಿವಾದಿ ಶ್ರೀ:ಶ್ರೀಮತಿ ಹೆಚ್.ಎಸ್. ನಾಗರಾಜ್ ಬಿನ್ ಬಿ.ಎನ್. ನಂಜುಂಡಪ್ಪ ರವರ ಬಳಿ ಚಾಲಕ: ಕ್ಲೀನರ್: ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 24.9.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 27.2.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 386 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:04-2004**

**ಅರ್ಜಿದಾರರು:**

1. ಲಕ್ಷ್ಮಮ್ಮ ಕೋಂ ಲೇಟ್ ಆದಿನಾರಾಯಣಪ್ಪ
2. ನಾಗರಾಜ್ ಬಿನ್ ಲೇಟ್ ಆದಿನಾರಾಯಣಪ್ಪ
3. ಲಕ್ಷ್ಮಿನಾರಾಯಣ ಬಿನ್ ಲೇಟ್ ಆದಿನಾರಾಯಣಪ್ಪ ಅರಕುಂಡ ವಿಲೇಜ್, ಮಂಚೇನಹಳ್ಳಿ ಹೋಬಳಿ, ಗೌರಿಬಿದನೂರು ತಾಲ್ಲೂಕು, ಕೋಲಾರ ಜಿಲ್ಲೆ.

ವಿರುದ್ಧ **ಪ್ರತಿವಾದಿಗಳು:**

1. ಚಿಕ್ಕಪಯ್ಯ ರೆಡ್ಡಿ ಬಿನ್ ಲೇಟ್ ನಾರಾಯಣರೆಡ್ಡಿ, ಅರಕುಂಡ ವಿಲೇಜ್, ಮಂಚೇನಹಳ್ಳಿ ಹೋಬಳಿ, ಗೌರಿಬಿದನೂರು ತಾಲ್ಲೂಕು, ಕೋಲಾರ ಜಿಲ್ಲೆ.
2. ಎ. ಸಿ. ನಾಗರಾಜ್ ಬಿನ್ ಚಿಕ್ಕಪಯ್ಯ ರೆಡ್ಡಿ, ಅರಕುಂಡ ವಿಲೇಜ್, ಮಂಚೇನಹಳ್ಳಿ ಹೋಬಳಿ, ಗೌರಿಬಿದನೂರು ತಾಲ್ಲೂಕು, ಕೋಲಾರ ಜಿಲ್ಲೆ.

**ಅಧಿಸೂಚನೆ**

ಅರ್ಜಿದಾರರಾದ ಲಕ್ಷ್ಮಮ್ಮ ಕೋಂ ಲೇಟ್ ಆದಿನಾರಾಯಣಪ್ಪ ಅವರು ತಮ್ಮ ಗಂಡ: ಮಗನಾದ ಶ್ರೀ ಆದಿನಾರಾಯಣಪ್ಪ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಚಿಕ್ಕಪಯ್ಯ ರೆಡ್ಡಿ ಬಿನ್ ಲೇಟ್ ನಾರಾಯಣರೆಡ್ಡಿ ರವರ ಬಳಿ ಚಾಲಕ: ಕ್ಲೀನರ್: ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 15.6.2001 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 27.2.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 387 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:03-2004**

**ಅರ್ಜಿದಾರರು:**

1. ನಾಗಮ್ಮ ಕೋಂ ಲೇಟ್ ನಾಗರಾಜ್
2. ಪ್ರವೀಣ್ ಬಿನ್ ಲೇಟ್ ನಾಗರಾಜ್
3. ಗಂಗುಲಮ್ಮ ಕೋಂ ಲೇಟ್ ಚಿನ್ನನರಸಪ್ಪ ಚಂಡುರಾಯನಪಲ್ಲಿ ಅಂಚೆ ಮತ್ತು ಕಾಲೋನಿ, ಗೋಳ್ಳುರು ಹೋಬಳಿ, ತಿಮ್ಮಮ್‌ಪಲ್ಲಿ ಗ್ರಾಮ ಪಂಚಾಯತ್, ಬಾಗೇಪಲ್ಲಿ ತಾಲ್ಲೂಕು, ಕೋಲಾರ ಜಿಲ್ಲೆ

ವಿರುದ್ಧ **ಪ್ರತಿವಾದಿಗಳು:**

1. ಟಿ. ನಂದಿರೆಡ್ಡಿ ಬಿನ್ ಟಿ. ನಾರಾಯಣರೆಡ್ಡಿ, ರಾಜ್‌ವಾರಪಲ್ಲಿ, ತಂಕಲು ಮಂಡಲಂ, ಅನಂತಪುರ ಜಿಲ್ಲೆ, ಆಂಧ್ರಪ್ರದೇಶ.
2. ದಿ ನ್ಯಾಷನಲ್ ಇನ್‌ಶೂರೆನ್ಸ್ ಕಂ.ಲಿ., ಶಾಖಾ ಕಛೇರಿ, ನಂ. 1092:2, ಬಿಂದು, ಡೂಂ ಲೇಟ್ ಸರ್ಕಲ್ ಹತ್ತಿರ, ಕೋಲಾರ ಜಿಲ್ಲೆ.

**ಅಧಿಸೂಚನೆ**

ಅರ್ಜಿದಾರರಾದ ನಾಗಮ್ಮ ಕೋಂ ಲೇಟ್ ನಾಗರಾಜ್ ಅವರು ತಮ್ಮ ಗಂಡ: ಮಗನಾದ ಶ್ರೀ ನಾಗರಾಜ್ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಟಿ. ನಂದಿರೆಡ್ಡಿ ಬಿನ್ ಟಿ. ನಾರಾಯಣ್ಣ ರೆಡ್ಡಿ ಬಳಿ ಚಾಲಕ: ಕ್ಲೀನರ್: ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 6.9.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 25.2.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 388 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:01-2004**

**ಅರ್ಜಿದಾರರು:**

1. ವೆಂಕಟಪ್ಪ ಬಿನ್ ಲೇಟ್ ನಿಂಗಪ್ಪ ವಿವರ್ಸ್ ಕಾಲೋನಿ ಪೌಲ್ಟ್ರಿ ಫಾರಂ ಲೇಔಟ್ ಬನ್ನೇರುಘಟ್ಟ ರಸ್ತೆ, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ.

ವಿರುದ್ಧ **ಪ್ರತಿವಾದಿಗಳು:**

1. ಶ್ರೀನಿವಾಸ್ ಬಿನ್ ತಾಯಪ್ಪ, ಲಾರಿ ಮಾಲೀಕರು, ವೀರಭದ್ರ ದೇವಸ್ಥಾನದ ಹತ್ತಿರ, ಬಿಳೆಕಳ್ಳಿ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 076
2. ದಿ ಓರಿಯಂಟಲ್ ಇನ್‌ಶೂರೆನ್ಸ್ ಕಂ.ಲಿ., 1ನೇ ಮಹಡಿ, 3ನೇ ಕ್ರಾಸ್, ಚಿಕ್ಕಣ್ಣ ಗಾರ್ಡನ್, ಶಂಕರಮಠ ರಸ್ತೆ, ಚಾಮರಾಜಪೇಟೆ, ಬೆಂಗಳೂರು-560 004.
3. ಜಯಮ್ಮ ಕೋಂ ಲೇಟ್ ನಾಗೇಶ್
4. ಒಂದು ಹೆಣ್ಣು ಮಗು ಇನ್ನೂ ಹೆಸರಿಟ್ಟಿಲ್ಲ ಇವರು ಅಪ್ರಾಪ್ತ ವಯಸ್ಕರಾಗಿರುವುದರಿಂದ ಅವರ ತಾಯಿಯಾದ 3ನೇ ಪ್ರತಿವಾದಿಯು ಪ್ರತಿನಿಧಿಸುತ್ತಾರೆ ತಲಘಟ್ಟಪುರ ಅಂಚೆ ಆನೇಕಲ್ ತಾ: ಬೆಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ವೆಂಕಟಪ್ಪ ಬಿನ್ ಲೇಟ್ ನಿಂಗಪ್ಪ ಅವರು ತಮ್ಮ ಮಗನಾದ ಶ್ರೀ ನಾಗೇಶ್ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಶ್ರೀನಿವಾಸ್ ಬಿನ್ ತಾಯಪ್ಪ ರವರ ಬಳಿ ಚಾಲಕ: ಕ್ಲೀನರ್: ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 25.6.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 25.2.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 389 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:02-2004**

**ಅರ್ಜಿದಾರರು:**

1. ನಂಜುಂಡಮ್ಮ ಕೋಂ ಲೇಟ್ ಆದಿನಾರಾಯಣಪ್ಪ
2. ನದೀಶ್ ಬಿನ್ ಲೇಟ್ ಆದಿನಾರಾಯಣಪ್ಪ
3. ರಾಜಮ್ಮ ಕೋಂ ಪುಲ್ಲನಂಜಪ್ಪ ಬೊಮ್ಮಯ್ಯಗಾರಿಪಲ್ಲಿ, ಗುಳ್ಳೂರು ಹೋಬಳಿ, ತಿಮ್ಮಮಪಲ್ಲಿ ಗ್ರಾಮ ಪಂಚಾಯತ್, ಚೆಂಚುರಾಯನಪಲ್ಲಿ ಅಂಚೆ, ಬಾಗೇಪಲ್ಲಿ ತಾಲ್ಲೂಕು, ಕೋಲಾರ ಜಿಲ್ಲೆ.

ವಿರುದ್ಧ **ಪ್ರತಿವಾದಿಗಳು:**

1. ಟಿ. ನಂದಿರೆಡ್ಡಿ ಬಿನ್ ಟಿ. ನಾರಾಯಣರೆಡ್ಡಿ ತಾಂಕಲು ಮಂಡಲಂ, ಅನಂತಪುರ ಜಿಲ್ಲೆ, ಆಂಧ್ರಪ್ರದೇಶ.
2. ದಿ ನ್ಯಾಷನಲ್ ಇನ್‌ಷೂರೆನ್ಸ್ ಕಂಪನಿ ಲಿಮಿಟೆಡ್ ಶಾಖಾ ಕಛೇರಿ, ನಂ.1092:2, ಬಿಂದು, ಡೂಂ ಲೈಟ್ ಸರ್ಕಲ್ ಹತ್ತಿರ, ಕೋಲಾರ ಜಿಲ್ಲೆ.

**ಅಧಿಸೂಚನೆ**

ಅರ್ಜಿದಾರರಾದ ನಂಜುಂಡಮ್ಮ ಕೋಂ ಲೇಟ್ ಆದಿನಾರಾಯಣಪ್ಪ ಅವರು ತಮ್ಮ ಗಂಡ:ಮಗನಾದ ಶ್ರೀ ಆದಿನಾರಾಯಣಪ್ಪ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಟಿ. ನಂದಿರೆಡ್ಡಿ ಬಿನ್ ಟಿ. ನಾರಾಯಣರೆಡ್ಡಿ ರವರ ಬಳಿ ಚಾಲಕ: ಕ್ಲೀನರ್: ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 6.9.2003 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 25.2.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 390 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ.

**ಸಿದ್ದಾಪುರ ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿ ಕೋರ್ಟಿನಲ್ಲಿ**

**ಪ್ರಕಟಣೆ**

ಈ ಕೆಳಗೆ ತೋರಿಸಿದ ವಾಹನಗಳ ನಿಜವಾದ ಮಾಲೀಕರು ಬಂದು ಕ್ಲೇಮು ಮಾಡಿದ್ದು ಇರುವುದಿಲ್ಲ, ಕಾರಣ ಸದ್ರಿ ವಾಹನಗಳ ನಿಜವಾದ ಮಾಲೀಕರು ಇದ್ದಲ್ಲಿ, ಈ ಪ್ರಕಟಣೆ ಆದ 6 ತಿಂಗಳೊಳಗಾಗಿ ಮೂಲ ಕಾಗದ ಪತ್ರಗಳ ದಾಖಲೆಗಳನ್ನು ಹಾಜರುಪಡಿಸಿ ಸಿದ್ದಾಪುರ ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸತಕ್ಕದ್ದು. ತಪ್ಪಿದ್ದಲ್ಲಿ ಕಾನೂನಿನಂತೆ ಕ್ರಮ ಜರುಗಿಸಲಾಗುವುದು.

| | ಕೇಸ್ ನಂ. | ವಾಹನ ಸಂಖ್ಯೆ | ಮಾಡೆಲ್ |
|---|---|---|---|
| 1. | ಸಿದ್ದಾಪುರ ಪಿ.ಎಫ್. ನಂ. 265:97 ಎಸ್.ಎಚ್.ಡಿ. ಎಂಟ್ರಿ ನಂ.10:97 ದಿನಾಂಕ: 29.12.97. | ಕೆಎ14:ಎಂ 461 | ಮಹೀಂದ್ರಾ ಜೀಪ್ |
| 2. | ಸಿದ್ಧಾಪುರ ಪಿ.ಎಫ್. ನಂ. 76:2000 ಎಸ್.ಎಚ್.ಡಿ. ಎಂಟ್ರಿ ನಂ.15:00 ದಿನಾಂಕ: 22.7.00 | ನಮೂದು ಇಲ್ಲಾ | ಬಿಳಿ ಮಹೀಂದ್ರಾ ಯುಟಲಿಟಿ ಜೀಪ್ ಇಂಜಿನ್ ನಂ. ಡಿಎಕ್ಸ್ 69041 ಮಾಡೆಲ್ ನಂ. ಡಬಲ್ ಕ್ಯಾಬ್ 900 ಎಮ್‌ಡಿ 2-ಡಬ್ಲ್ಯೂ |
| 3. | ಸಿದ್ದಾಪುರ ಪಿ.ಎಫ್. ನಂ.17:03 ಎಸ್.ಎಚ್.ಡಿ. ಎಂಟ್ರಿ ನಂ.10:03: ದಿನಾಂಕ: 26.2.03 | ನಮೂದು ಇಲ್ಲಾ | ಕೆಂಪು ಬಣ್ಣದ ಮಾರುತಿ ಕಾರ್ ಇಂಜಿನ್ ನಂ. ಎಫ್ 8 ಬಿ. ಐ. ಎನ್ 507966 ಚಾಸ್ಸಿ ನಂ. ಎಸ್‌ಬಿ 308 ಇನ್ 362595. |
| 4. | ಸಿದ್ದಾಪುರ ಪಿ.ಎಫ್. ನಂ. 19:03 ಎಸ್.ಎಚ್.ಡಿ. ಎಂಟ್ರಿ ನಂ.35:03 ದಿನಾಂಕ: 2.3.03 | ನಮೂದು ಇಲ್ಲಾ | ಯಮಾಹಾ ಕಂಪನಿಯ ಮೋಟಾರ್ ಸೈಕಲ್, ತುಕ್ಕು ಹಿಡಿದಿದ್ದು ನಂಬರ್ ಪ್ಲೇಟ್ ಇರುವುದಿಲ್ಲಾ ಇಂಜಿನ್ ನಂ. ಐಎಲ್‌ಐ 491914 ಚಾಸ್ಸಿ ನಂ. 7406 ಎಫ್ 427306 |

ಪಿ.ಆರ್. 392 ಸಿವಿಲ್ ಜಡ್ಜ್ (ಕಿ.ವಿ) ಮತ್ತು ಜೆ.ಎಂ.ಎಫ್‌ಸಿ., ಸಿದ್ಧಾಪುರ.

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,**

**ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001.**

**"ಪತ್ರಿಕಾ ಪ್ರಕಟಣೆ"**

**ಸಂಖ್ಯೆ: ಕರಾಆ:ಆಡಳಿತ:50:2003-04 ದಿನಾಂಕ: 27ನೇ ಫೆಬ್ರವರಿ 2004**

ಬೀದರ್ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯಲ್ಲಿ ದಿನಾಂಕ: 3.9.1998ರಿಂದ ಗ್ರೂಪ್ 'ಡಿ' ನೌಕರರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಶಂಕರ ಇವರು ದಿನಾಂಕ: 8.10.2003 ರಿಂದ ಬೀದರ್ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ರಜಾ ಮಂಜೂರಾತಿ ಸಕ್ಷಮ ಪ್ರಾಧಿಕಾರದಿಂದ ರಜಾ ಮಂಜೂರಾತಿ ಮಾಡಿಸಿಕೊಳ್ಳದೇ, ಅನಧಿಕೃತ ಗೈರು ಹಾಜರಾಗಿರುವುದಲ್ಲದೇ, ಕರ್ತವ್ಯಕ್ಕೆ ಹಾಜರಾಗುವಂತೆ ತಿಳುವಳಿಕೆ ನೀಡಿದ್ದರೂ ಕೂಡ, ಇದುವರೆವಿಗೆ ಅನಧಿಕೃತ ಗೈರುಹಾಜರಿಯಲ್ಲಿರುವುದು ಸದರಿ ನೌಕರರ ದುರ್ನಡತೆಯಾಗಿರುತ್ತದೆ. ಈ ದುರ್ನಡತೆಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11(4)ರ ಮೇರೆಗೆ ತಿಳುವಳಿಕೆಯನ್ನು ಹೊರಡಿಸಿದ್ದು, ಸದರಿ ತಿಳುವಳಿಕೆಯು ಅನುಬಂಧ 1 ರಿಂದ 4ರ ಜೊತೆಗೆ ಬೀದರ್ ಜಿಲ್ಲಾ ವೇದಿಕೆಯಲ್ಲಿ ಲಭ್ಯವಿರುತ್ತದೆ.

ಶ್ರೀ ಶಂಕರ ಇವರು ಕೂಡಲೇ ಸದರಿ ತಿಳುವಳಿಕೆಯನ್ನು ಜಿಲ್ಲಾ ವೇದಿಕೆಯಿಂದ ಪಡೆದುಕೊಂಡು, ತಮ್ಮ ಅಹವಾಲನ್ನು ಸಲ್ಲಿಸುವುದಿದ್ದಲ್ಲಿ ಅಥವಾ ಮುಖತಃ ಹೇಳುವುದಿದ್ದಲ್ಲಿ, ಈ ಪ್ರಕಟಣೆಯು ಪ್ರಕಟಗೊಂಡ ದಿನಾಂಕದಿಂದ 45 ದಿನಗಳೊಳಗಾಗಿ ನ್ಯಾಯಮೂರ್ತಿ ಟಿ. ಜಯರಾಮ ಚೌಟ, ಅಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001 ಹಾಗೂ ಶಿಸ್ತು ಪ್ರಾಧಿಕಾರಿ ಮತ್ತು ನೇಮಕಾತಿ ಪ್ರಾಧಿಕಾರಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆ ಇವರಿಗೆ ಸಲ್ಲಿಸಬಹುದು ಅಥವಾ ಇವರಲ್ಲಿ ಹೇಳಿಕೊಳ್ಳಬಹುದು. ನಿಗದಿತ ಅವಧಿಯೊಳಗೆ ಯಾವುದೇ ಅಹವಾಲನ್ನು ಸಲ್ಲಿಸದಿದ್ದಲ್ಲಿ ಅಥವಾ ಮುಖತಃ ಹೇಳಿಕೊಳ್ಳದಿದ್ದಲ್ಲಿ, ಶ್ರೀ ಶಂಕರ್‌ರವರ ಹೇಳಿಕೆ ಏನೂ ಇಲ್ಲವೆಂದು ಏಕಪಕ್ಷೀಯವಾಗಿ ತೀರ್ಮಾನಿಸಿ, ನಿಯಮಾನುಸಾರ ಕ್ರಮವಹಿಸಲಾಗುವುದು.

**ನ್ಯಾಯಮೂರ್ತಿ ಟಿ. ಜಯರಾಮ ಚೌಟ**

ಅಧ್ಯಕ್ಷರು, ಕರ್ನಾಟಕ ರಾಜ್ಯ, ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು. ಹಾಗೂ ಶಿಸ್ತು ಪ್ರಾಧಿಕಾರಿ ಮತ್ತು ನೇಮಕಾತಿ ಪ್ರಾಧಿಕಾರ, ಕನಾಟಕ
ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆ.

ಪಿ.ಆರ್. 393

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ನ್ಯಾಯಾಲಯದಲ್ಲಿ**

**ಆದೇಶ ಸಂಖ್ಯೆ:ಇಎಕ್ಸ್‌ಇ:ಸಿಆರ್ಎಂ:81:99-2000 ದಿನಾಂಕ: 19ನೇ ಫೆಬ್ರವರಿ 2004**

**ಉಪಸ್ಥಿತರು :** ಶ್ರೀ ಮಹಮದ್ ಇಲಿಯಾಸ್ ಅಹಮದ್ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ ಆಫ್ ಎಕ್ಸೈಜ್ ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು:**
1. ಅಬಕಾರಿ ನಿರೀಕ್ಷಕರು ಸೋಮವಾರಪೇಟೆ ವಲಯ ಸೋಮವಾರಪೇಟೆ.

**ವಿರುದ್ಧ** **ಆರೋಪಿಗಳು:**
1. ಬಿ. ಕೆ. ಮುತ್ತಣ್ಣ ತಂದೆ ಬಿ. ಎಂ. ಕಾರ್ಯಪ್ಪ ಮನೆ ನಂ. 1/76, 1ನೇ ಬ್ಲಾಕ್ ಕುಶಾಲನಗರ.

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 31.3.2001 ಸೋಮವಾರಪೇಟೆ ಅರಣ್ಯ ಸಂಚಾರಿ ದಳದ ಆರಕ್ಷಕ ಉಪ ನಿರೀಕ್ಷಕರವರು ತಮ್ಮ ಸಿಬ್ಬಂದಿಯವರೊಂದಿಗೆ ಸೋಮವಾರಪೇಟೆ ತಾಲ್ಲೂಕು, ಕುಶಾಲನಗರದ ಮುಳ್ಳುಸೋಗೆಯ ನೆಹರು ಬಡಾವಣೆಯಲ್ಲಿ ನಿಂತು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಯ ಬಗ್ಗೆ ವಾಹನಗಳ ತಪಾಸಣೆ ಮಾಡುತ್ತಿದ್ದ ಸಮಯದಲ್ಲಿ ಸಾಯಂಕಾಲ ಸುಮಾರು 7-30 ಗಂಟೆಗೆ ಹಾಸನದ ಕಡೆಯಿಂದ ಕುಶಾಲನಗರದ ಕಡೆಗೆ ಬರುತ್ತಿದ್ದ ಒಂದು ಬಿಳಿ ಬಣ್ಣದ ಟಾಟಾ ಸುಮೊ ನಂ. ಕೆಎ-12-ಪಿ-246 ರನ್ನು ಸಂಶಯದಿಂದ ತಡೆದು ನಿಲ್ಲಿಸಿದಾಗ ವಾಹನದಲ್ಲಿ ಚಾಲಕನಲ್ಲದೆ ಇನ್ನಿಬ್ಬರು ಆಸಾಮಿಗಳಿದ್ದು ವಾಹನದ ಒಳಗಡೆ ನೋಡಿದಾಗ ಪ್ಲಾಸ್ಟಿಕ್ ಚೀಲಗಳ ಮೂಟೆಗಳು ಕಂಡುಬಂದಿದ್ದು ಅವುಗಳನ್ನು ಪರಿಶೀಲಿಸಿದಾಗ ಸದರಿ ಮೂಟೆಗಳಲ್ಲಿ ಸಾರಾಯಿ ಪ್ಯಾಕೇಟುಗಳು ತುಂಬಿರುವುದು ಪತ್ತೆಯಾಗಿರುತ್ತದೆ. ಆದುದರಿಂದ ಸದರಿ ಸಾರಾಯಿ ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರ ವಗೈರೆ ಇದೆಯೇ ಎಂದು ಚಾಲಕ ಮತ್ತು ವಾಹನದಲ್ಲಿ ಕುಳಿತಿದ್ದವರನ್ನು ಕೇಳಿದಾಗ ಯಾವುದೂ ಇಲ್ಲವೆಂದು ತಿಳಿಸಿರುತ್ತಾರೆ. ನಂತರ ಸದರಿ ಸಾರಾಯಿ ಪ್ಯಾಕೇಟ್ ತುಂಬಿದ ಮೂಟೆಗಳನ್ನು ಎಣಿಸಿ ನೋಡಲಾಗಿ ಒಟ್ಟು 23 ಸಾರಾಯಿ ಮೂಟೆಗಳಿದ್ದು ಅವುಗಳಲ್ಲಿ ಪ್ರತಿಯೊಂದು ಮೂಟೆಗಳಿಂದ 100 ಎಂ.ಎಲ್ ಗಾತ್ರದ 200 ಸಾರಾಯಿ ಪ್ಯಾಕೇಟ್‌ಗಳಂತೆ ಒಟ್ಟು 23 ಚೀಲಗಳಲ್ಲಿ 4600 ಸಾರಾಯಿ ಪ್ಯಾಕೇಟುಗಳಿರುವುದು ಪತ್ತೆಯಾಗಿರುತ್ತದೆ. ಭಾರಿ ಪ್ರಮಾಣದ ಸಾರಾಯಿ ಪ್ಯಾಕೇಟ್‌ಗಳನ್ನು ಸರ್ಕಾರದ ಯಾವುದೇ ಅಧಿಕೃತ ರಹದಾರಿ ಪತ್ರ ವಗೈರೆ ಇಲ್ಲದೆ ಸಾಗಾಣಿಕೆ ಮಾಡುವುದು ಅಬಕಾರಿ ಕಾಯ್ದೆಗೆ ವಿರೋಧವಾದುದರಿಂದ ಆದುದರಿಂದ ಸದರಿ ಟಾಟಾ ಸುಮೊ ನಂ. ಕೆಎ-12-ಪಿ-246 ಹಾಗೂ ಅದರಲ್ಲಿದ್ದ 4600 x 100 ಎಂ.ಎಲ್‌ನ ಸಾರಾಯಿ ಪ್ಯಾಕೇಟುಗಳನ್ನು ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿ ಪಂಚನಾಮೆಯನ್ನು ಮಾಡಿ ವಾಹನದಲ್ಲಿದ್ದ 1ನೇ ರಂಗನಾಥ ತಂದೆ ಪಾಪಣ್ಣ ಚಾಲಕ, 2ನೇ ಬ್ಲಾಕ್, ಕುಶಾಲನಗರ, 2ನೇ ಜಗದೀಶ ತಂದೆ ಪೌತಿ ಸುಬ್ರಮಣಿ, 4ನೇ ಬ್ಲಾಕ್ ನೆಹರು ನಗರ, ಮುಳ್ಳುಸೋಗೆ, 3ನೇ ಬಿ. ಸಿ. ಅಚ್ಚಯ್ಯ ತಂದೆ ಪೌತಿ ಕಾರ್ಯಪ್ಪ, ಚೇಯಂಡಾಣೆ ಹಾಗೂ 4ನೇ ವಾಹನದ ಮಾಲೀಕರಾದ ಬಿ. ಕೆ. ಮುತ್ತಣ್ಣ, ತಂದೆ ಬಿ. ಎಂ. ಕಾರ್ಯಪ್ಪ, ಕುಶಾಲನಗರ ಇವರುಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಸೋಮವಾರಪೇಟೆ ವಲಯದ ಅಬಕಾರಿ ನಿರೀಕ್ಷಕರವರಿಗೆ ವಾಹನ ಮತ್ತು ಸಾರಾಯಿ ಪ್ಯಾಕೇಟ್‌ಗಳನ್ನು ಮತ್ತು ಆರೋಪಿಗಳನ್ನು ಒಪ್ಪಿಸಿರುತ್ತಾರೆ.

ಸೋಮವಾರಪೇಟೆ ವಲಯದ ಅಬಕಾರಿ ನಿರೀಕ್ಷಕರವರು ಈ ಪ್ರಕರಣದಲ್ಲಿ ಸ್ವಾಧೀನಪಡಿಸಿಕೊಂಡ ಸ್ವತ್ತುಗಳನ್ನು ವಶಕ್ಕೆ ತೆಗೆದುಕೊಂಡು ಮೇಲ್ಕಂಡ ಆರೋಪಿಗಳ ಮೇಲೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 11, 14, 32,34, 38 ಮತ್ತು 43ರ ಪ್ರಕಾರ ಪ್ರ.ವ.ವ.ನಂ. 11/99-2000 ದಿನಾಂಕ: 1.4.2000 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ. 43ರ ಪ್ರಕಾರ ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿನ ಕಡತವನ್ನು ಈ ಪ್ರಾಧಿಕಾರ ಕೂಲಂಕುಶವಾಗಿ ಪರಿಶೀಲಿಸಿದಾಗ ವಾಹನ ಮಾಲೀಕರು ಅವರಿಗೆ ತಿಳಿದೇ ಸದರಿ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಮೇಲ್ನೋಟಕ್ಕೆ ಕಂಡುಬಂದ ಕಾರಣ ಸದರಿ ವಾಹನವನ್ನು 4600x100 ಎಂ.ಎಲ್.ನ ಸಾರಾಯಿ ಪ್ಯಾಕೇಟುಗಳನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರಂದು ಜಾರಿ ಮಾಡಿ ಏಳು ದಿನಗಳೊಳಗಾಗಿ ಸೂಕ್ತ ಸಮಜಾಯಿಸಿಕೆಯನ್ನು ಸಲ್ಲಿಸುವಂತೆ ವಾಹನದ ಮಾಲೀಕರಿಗೆ ನೋಟೀಸ್ ನೀಡಲಾಗಿತ್ತು.

ಸದರಿ ಕಾರಣ ಕೇಳುವ ನೋಟೀಸ್ ಬಗ್ಗೆ ಶ್ರೀ ಬಿ. ಕೆ. ಮುತ್ತಣ್ಣ ತಂದೆ ಬಿ. ಎಂ. ಕಾರ್ಯಪ್ಪ ಮನೆ ನಂ. 1/76, 1ನೇ ಬಡಾವಣೆ, ಕುಶಾಲನಗರ ಟೌನ್ ರವರು ತಮ್ಮ ಪರ ವಕೀಲರ ಮೂಲಕ ಒಂದು ಲಿಖಿತ ಅರ್ಜಿಯನ್ನು ಸಲ್ಲಿಸಿ ತಾನು ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಟಾಟಾ ಸುಮೊ ನಂ. ಕೆಎ-12-ಪಿ246 ರ ಅಧಿಕೃತ ಮಾಲೀಕನಾಗಿದ್ದು ತನ್ನ ವಾಹನವನ್ನು ಚಾಲಕನು ನನಗೆ ತಿಳಿಯದಂತೆ

ಸದರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡಿದ್ದು ಅಬಕಾರಿ ಕಾಯ್ದೆಯನ್ನು ಉಲ್ಲಂಘನೆ ಮಾಡಿರುತ್ತಾರೆ. ಈ ಕಾರಣದಿಂದ ಸದರಿ ವಾಹನವನ್ನು ಇಲಾಖಾ ಅಧಿಕಾರಿಗಳು ಸ್ವಾಧೀನಪಡಿಸಿಕೊಂಡು ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರವರ ಘನ ನ್ಯಾಯಾಲಯದ ಮುಂದೆ ಹಾಜರುಪಡಿಸಿರುತ್ತಾರೆ.

ಸದರಿ ವಾಹನವನ್ನು ತೆರೆದ ಪ್ರದೇಶದಲ್ಲಿ ಯಾವುದೇ ಭದ್ರತೆ ಇಲ್ಲದೆ ನಿಲ್ಲಿಸಿದ್ದು ಈ ವಾಹನದ ಮೇಲೆ ಘನ ನ್ಯಾಯಾಲಯದಲ್ಲಿ ಅಂತಿಮ ಆದೇಶ ಆಗುವಲ್ಲಿಯವರೆಗೆ ನಿಲ್ಲಿಸಿದ್ದಲ್ಲಿ ಇದು ಪ್ರಕೃತಿಯ ವಿಕೋಪದಿಂದ ವಾಹನದ ಇಂಜಿನ್ ಇತ್ಯಾದಿ ಭಾಗಗಳು ತುಕ್ಕು ಹಿಡಿದು ವಿಪರೀತ ನಷ್ಟ ಉಂಟಾಗುವ ಸಾಧ್ಯತೆ ಇರುವುದರಿಂದ ಸದರಿ ವಾಹನಕ್ಕೆ ಘನ ನ್ಯಾಯಾಲಯವು ವಿಧಿಸುವ ತಕ್ಕ ಭದ್ರತೆಯನ್ನು ನೀಡಲು ತಾನು ಬದ್ದನಾಗಿರುತ್ತೇನೆ. ಆದುದರಿಂದ ಸದರಿ ವಾಹನವನ್ನು ಮಾನವೀಯತೆಯ ದೃಷ್ಟಿಯಿಂದ ಮಧ್ಯಂತರಿಕವಾಗಿ ಬಿಡುಗಡೆಗೊಳಿಸಿ ಕೊಡಬೇಕಾಗಿ ವಿನಂತಿಸಿಕೊಂಡಿರುತ್ತಾರೆ.

ಸದರಿ ವಾಹನದ ಮಾಲಿಕರು ಈ ನ್ಯಾಯಾಲಯದಲ್ಲಿ ತಮ್ಮ ಪರ ವಕೀಲರ ಮೂಲಕ ಸಲ್ಲಿಸಿದ ಅರ್ಜಿಯನ್ನು ಈ ಪ್ರಾಧಿಕಾರದಲ್ಲಿ ಪರಿಶೀಲಿಸಲಾಯಿತು. ಹಾಗೂ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನವು ಸುಸ್ಥಿತಿಯಲ್ಲಿದ್ದು ಈ ವಾಹನವನ್ನು ತೆರೆದ ಪ್ರದೇಶದಲ್ಲಿ ಭದ್ರತೆ ಹಾಗೂ ಚಾಲನೆ ಇಲ್ಲದೆ ನಿಲ್ಲಿಸಿದ್ದಲ್ಲಿ ಇದರ ಮೇಲೆ ದಾಖಲಾದ ಮೊಕದ್ದಮೆಯು ಅಂತಿಮ ಆದೇಶ ಆಗುವಲ್ಲಿಯವರೆಗೆ ಹವಾಮಾನದ ವಿಕೋಪದಿಂದ ವಾಹನದ ಇಂಜಿನ್ ಇತರೆ ಭಾಗಗಳು ತುಕ್ಕು ಹಿಡಿದು ಅದರ ಮೌಲ್ಯವನ್ನು ಕಳೆದುಕೊಳ್ಳುವ ಸಾಧ್ಯತೆ ಇರುತ್ತದೆ. ಆದುದರಿಂದ ಸದರಿ ವಾಹನದ ಅಂದಿನ ಸ್ಥಿತಿಗನುಗುಣವಾಗಿ ಈ ಪ್ರಾಧಿಕಾರದಲ್ಲಿ ಸದರಿ ವಾಹನಕ್ಕೆ ರೂ.3,00,000-00 (ಮೂರು ಲಕ್ಷ)ವನ್ನು ನಿಗದಿಪಡಿಸಿ ಷರತ್ತುಗಳ ಮೇಲೆ ದಿನಾಂಕ: 11.4.2000 ರಂದು ಮಧ್ಯಂತರಿಕವಾಗಿ ಬಿಡುಗಡೆಗೊಳಿಸಲು ಆದೇಶ ನೀಡಲಾಯಿತು. ಇದರಂತೆ ವಾಹನದ ಮಾಲೀಕರು ರೂ.1,50,000-00 (ಒಂದು ಲಕ್ಷ ಐವತ್ತು ಸಾವಿರ)ಕ್ಕೆ ಸಮನಾದ ಬ್ಯಾಂಕ್ ಗ್ಯಾರಂಟಿಯನ್ನು ಹಾಗೂ ಇನ್ನುಳಿದ ಅರ್ಧ ಭಾಗಕ್ಕೆ ಸಾಲ್ವೆನ್ಸಿ ದೃಢೀಕರಣವನ್ನು ಸಲ್ಲಿಸಿ ವಾಹನವನ್ನು ಮಧ್ಯಂತರಿಕವಾಗಿ ಪಡೆದುಕೊಂಡಿರುತ್ತಾರೆ. ಸದರಿ ಪ್ರಕರಣದಲ್ಲಿ ಸ್ವಾಧೀನ ಪಡಿಸಿಕೊಂಡ ಸಾರಾಯಿ ಪ್ಯಾಕೇಟುಗಳಲ್ಲಿ 23x100 ಎಂ.ಎಲ್. ಸಾರಾಯಿ ಪ್ಯಾಕೇಟುಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ವಲಯ, ಮಂಗಳೂರು ರವರಿಗೆ ಕಳುಹಿಸಿಕೊಡಲಾಗಿ ಅವರು ಸದರಿ ಸಾರಾಯಿ ಪ್ಯಾಕೇಟುಗಳನ್ನು ಪರಿಶೀಲಿಸಿದಾಗ ಪ್ರತಿಯೊಂದು ಪ್ಯಾಕೇಟಿನಲ್ಲಿನ ದ್ರವವು ಸಾರಾಯಿಯಾಗಿದ್ದು ಅದರ ಸಾಂದ್ರತೆಯು 52 ಯುಪಿ ಇರುವುದಾಗಿ ಹಾಗೂ ಇದು ಕಡಿಮೆ ಸಾಂದ್ರತೆ ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಸದರಿ ಪ್ಯಾಕೇಟಿನಲ್ಲಿರುವ ಸಾರಾಯಿಯು ರಾಸಾಯನಿಕ ತಜ್ಞರ ವರದಿಯ ಪ್ರಕಾರ ಕಡಿಮೆ ಸಾಂದ್ರತೆಯುಳ್ಳ ಸಾರಾಯಿಯಾದ ಕಾರಣ ಇದು ಮಾನವ ಸೇವನೆಗೆ ಉಪಯುಕ್ತವಲ್ಲದ ಕಾರಣ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಸಾರಾಯಿ ಪ್ಯಾಕೇಟುಗಳಲ್ಲಿ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ ಎಲ್ಲಾ ಸಾರಾಯಿ ಪ್ಯಾಕೇಟುಗಳನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಎ ಉಪ ಕಲಂ.2ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಉಪ ಕಲಂ.3ರ ಅಡಿಯಲ್ಲಿ ಅನುಪಯುಕ್ತ ಸಾರಾಯಿ ಪ್ಯಾಕೇಟುಗಳನ್ನು ನಾಶಪಡಿಸಲು ಅಧಿಕೃತ ಅಧಿಕಾರಿ, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಆದೇಶ ಸಂಖ್ಯೆ ಇಎಕ್ಸ್‌ಇ3:ಸಿಆರ್‌ಎಂ.81/99-2000 ದಿನಾಂಕ: 31.10.2003 ರಂತೆ ನಾಶಪಡಿಸಲು ಆದೇಶ ನೀಡಲಾಗಿರುತ್ತದೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಟಾಟಾ ಸುಮೊ ಕೆಎ-12-ಪಿ-246 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ. 43ಎ ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸಲುವಾಗಿ ವಾಹನದ ಮಾಲೀಕರನ್ನು ವಿಚಾರಣೆಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಲು ನೋಟಿಸ್ ನೀಡಲಾಯಿತು. ಈ ಮದ್ಯೆ ಸದರಿ ಪ್ರಕರಣದ ಬಗ್ಗೆ ಪ್ರಾಧಿಕಾರದಲ್ಲಿ ಮೊಕದ್ದಮೆಯನ್ನು ನಡೆಸಲು ಅರ್ಜಿದಾರರ ಪರ ನೇಮಕಗೊಂಡಿದ್ದ ವಕೀಲರಾದ ಶ್ರೀ ಸಿ.ಟಿ. ಮುತ್ತಪ್ಪರವರು ತಾನು ಈ ಪ್ರಕರಣದಲ್ಲಿ ವಾದ ನಡೆಸಲು ನಾನು ನಿವೃತ್ತನಾಗಿರುವುದಾಗಿ ದಿನಾಂಕ: 19.2.2004 ರಂದು ಅರ್ಜಿಯನ್ನು ಸಲ್ಲಿಸಿರುತ್ತಾರೆ. ಹಾಗೂ ಸದರಿ ಮಾಲೀಕರು ಹಾಗೂ ಅರ್ಜಿದಾರರಾದ ಶ್ರೀ ಬಿ. ಕೆ. ಮುತ್ತಣ್ಣರವರು ದಿನಾಂಕ: 19.2.2004 ರಂದು ಈ ಪ್ರಾಧಿಕಾರದ ಮುಂದೆ ಒಂದು ಲಿಖಿತ ಅರ್ಜಿಯನ್ನು ಸಲ್ಲಿಸಿ ತನ್ನ ಆರ್ಥಿಕ ಸ್ಥಿತಿ ಸರಿ ಇಲ್ಲದ ಕಾರಣ ಸದರಿ ಮೊಕದ್ದಮೆಯನ್ನು ಘನ ನ್ಯಾಯಾಲಯದಲ್ಲಿ ನಾನು ನಡೆಸಲು ಶಕ್ತನಲ್ಲನೆಂದು ಈ ಹಿಂದೆ ನಾನು ನೇಮಿಸಿದ ವಕೀಲರು ಸಹ ಈ ಪ್ರಕರಣದಿಂದ ನಿವೃತ್ತನಾಗಿರುವುದರಿಂದ ಮತ್ತೆ ಬೇರೊಬ್ಬ ವಕೀಲರನ್ನು ನೇಮಿಸಿ ಮೊಕದ್ದಮೆಯನ್ನು ಈ ಪ್ರಾಧಿಕಾರದ ಮುಂದೆ ನಡೆಸಲು ಸಾಧ್ಯವಿಲ್ಲದ್ದರಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಕಾನೂನು ರೀತಿಯಲ್ಲಿ ತಮ್ಮ ಪ್ರಾಧಿಕಾರದಲ್ಲಿ ವಿಲೇವಾರಿ ಮಾಡಲು ತನ್ನಿಂದ ಯಾವುದೇ ಅಭ್ಯಂತರವಿಲ್ಲವೆಂದು ಹಾಗೂ ಈ ಪ್ರಾಧಿಕಾರ ನೀಡುವ ಆದೇಶಕ್ಕೆ ತಾನು ಬದ್ದನಾಗಿರುವೆನೆಂದು ಲಿಖಿತದ ಮೂಲಕ ವಿನಂತಿಸಿಕೊಂಡಿರುತ್ತಾರೆ.

ರಾಸಾಯನಿಕ ತಜ್ಞರು ತಮ್ಮ ದೃಢೀಕರಣ ಪತ್ರದಂತೆ ವಾಹನದಲ್ಲಿ ಸದರಿ ದಿನಾಂಕದಂದು ಸಾಗಾಣಿಕೆ ಆಗಿರುವ ದ್ರವವು ಸಾರಾಯಿ ಎಂದು ದೃಢೀಕರಿಸಿರುವುದರಿಂದ ಹಾಗೂ ಸಾಗಾಣಿಕೆ ಮಾಡಲಾದ ದ್ರವವು ಸಾರಾಯಿ ಎಂದು ಸಾಬೀತಾಗಿರುವುದರಿಂದ ಸದರೀ ವಾಹನವನ್ನು ಅಬಕಾರಿ ಕಾಯ್ದೆಗೆ ವಿರೋಧವಾದ ಕೃತ್ಯಕ್ಕೆ ಬಳಸಿರುವುದು ಈ ಪ್ರಾಧಿಕಾರದಲ್ಲಿ ಮೇಲ್ನೋಟಕ್ಕೆ ಸಾಬೀತು ಆಗಿರುವುದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಟಾಟಾ ಸುಮೋ ನಂ. ಕೆಎ-12-ಪಿ-246ರ ಮಾಲೀಕರು ಸದರಿ ಪ್ರಕರಣವನ್ನು ಈ ಪ್ರಾಧಿಕಾರದ ಮುಂದೆ ನಡೆಸಲು ಶಕ್ತನಲ್ಲದ ಕಾರಣ ಹಾಗೂ ಸದರಿ ವಾಹನದ ಬಗ್ಗೆ ಈ ಪ್ರಾಧಿಕಾರ ಕಾನೂನು ಪ್ರಕಾರ ಕೈಗೊಳ್ಳುವ ಕ್ರಮಕ್ಕೆ ತನ್ನದೇನೂ ಅಭ್ಯಂತರವಿಲ್ಲವೆಂದು ಲಿಖಿತ ಮೂಲಕ ವಿನಂತಿಸಿಕೊಂಡಿರುವುದರಿಂದ ಹಾಗೂ ಈ ವಾಹನದ ಬಗ್ಗೆ ಮುಂದೆ ಯಾರೂ ಹಕ್ಕು ಚಲಾಯಿಸದೇ ಇರುವ ಕಾರಣ ಮತ್ತು ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಪ್ಯಾಕೇಟುಗಳನ್ನು ಅಧಿಕೃತವಾಗಿಯೇ ಸಾಗಾಣಿಕೆ ಮಾಡಲಾಗುತ್ತಿತ್ತು ಎಂಬುದನ್ನು ವಾಹನದ ಮಾಲೀಕರಾಗಲಿ ಈ ಪ್ರಕರಣದಲ್ಲಿನ ಆರೋಪಿಗಳಾಗಲಿ ಸಾಕ್ಷಾಧಾರಗಳೊಂದಿಗೆ ಸಾಬೀತುಪಡಿಸಲು ವಿಫಲರಾಗಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರ ಅಭಿಪ್ರಾಯಪಟ್ಟಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

ಈ ಪ್ರಕರಣದ ಮುಖ್ಯಾಂಶದಲ್ಲಿ ವಿವರಿಸಲಾದ ಸನ್ನಿವೇಶದಂತೆ ಮಹಮದ್ ಇಲಿಯಾಸ್ ಅಹಮದ್ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43 ಎ ರ ಅಡಿಯಲ್ಲಿ ಸರ್ಕಾರದಿಂದ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಸೋಮವಾರಪೇಟೆ ಅಬಕಾರಿ ನಿರೀಕ್ಷಕರು ಪ್ರ.ವ.ವ.ನಂ.11/99-2000 ದಿನಾಂಕ:1.4.2000ರಲ್ಲಿ ಸ್ವಾಧೀನಪಡಿಸಿಕೊಂಡ ಟಾಟಾ ಸುಮೊ ನಂ. ಕೆಎ-12-ಪಿ-246ರನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ. 43ಎ 2ರ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಹಾಗೂ ಸದರಿ ವಾಹನದ ಮೇಲೆ ಈ ಪ್ರಾಧಿಕಾರದಲ್ಲಿ ವಾಹನದ ಮಾಲಿಕರಿಂದ ಪಡೆಯಲಾದ ರೂ. 1,50,000-00 (ಒಂದು ಲಕ್ಷ ಐವತ್ತು ಸಾವಿರ) ಮೌಲ್ಯದ ಬ್ಯಾಂಕ್ ಗ್ಯಾರಂಟಿ ನಂ. 4/2000 ಮತ್ತು 1,50,000-00 (ಒಂದು ಲಕ್ಷದ ಐವತ್ತು ಸಾವಿರ) ನಷ್ಟ ಭರ್ತಿ ಕರಾರು ಪತ್ರವನ್ನು ವಾಹನದ ಮಾಲಿಕರಿಗೆ ಬಿಡುಗಡೆಗೊಳಿಸಲು ಆದೇಶ ನೀಡಿರುತ್ತೇನೆ. ಈ ಆದೇಶವನ್ನು ಇಂದು ಅಂದರೆ ದಿನಾಂಕ: 19.2.2004 ರಂದು ಶ್ರೀಘ್ರ ಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ, ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡಿರುವ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು ಎಂದು ಆದೇಶಿಸಿರುತ್ತೇನೆ.

**ಮಹಮ್ಮದ್ ಇಲಿಯಾಸ್ ಅಹಮದ್**

ಪಿ.ಆರ್. 394 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**

**ನಂ. ಅಬಕಾರಿ:ಸಿಆರ್ಎಂ:ಡಿಟಿಸಿಆರ್:162:2000-01 ದಿನಾಂಕ: 27ನೇ ಫೆಬ್ರವರಿ 2004**

**ಉಪಸ್ಥಿತರು:** 1. ಶ್ರೀ ಕೆ. ಸಿ. ಹರಿದಾಸ ಕೆ.ಇ.ಎಸ್. ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಶನರ್ ಆಫ್ ಎಕ್ಸೈಜ್ ಉತ್ತರ ಕನ್ನಡ ಜಿಲ್ಲೆ, ಕಾರವಾರ

**ಫಿರ್ಯಾದಿ :** 1. ಎಸ್. ಎಸ್. ಖತೀಬ್
ಪ್ರಭಾರಿ ಅಬಕಾರಿ ಉಪ ಅಧೀಕ್ಷಕರು ತನಿಖಾ ಠಾಣೆ ಮಾಜಾಳಿ
(ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು ಕಾರವಾರ ಇವರು ಪ್ರತಿನಿಧಿಸಿರುತ್ತಾರೆ)

**ವಿರುದ್ಧ**

**ಅರ್ಜಿದಾರರು:** 1. ತಿರು ಎ. ಪನೀರಸೆಲ್ವಂ ತಂದೆ ಅಣ್ಣಾಮಲೈ ಲಕ್ಷ್ಮೀಪುರಂ ಸ್ಟ್ರೀಟ್ ತಿರುವನ್ನಮಲೈ, ಸಾಂಬುವರಾಯರ ಡಿಸ್ಟ್ರಿಕ್ಟ್, ತಮಿಳುನಾಡು ರಾಜ್ಯ
(ಶ್ರೀ ಪಿ. ಎಂ. ನಾಯ್ಕ, ವಕೀಲರು ಕಾರವಾರ ಇವರು ಪ್ರತಿನಿಧಿಸಿರುತ್ತಾರೆ)

**ತೀರ್ಪು**

ಈ ಆರೋಪವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14 ಮತ್ತು 15 ರಂತೆ ಹಾಗೂ ಕಲಂ 32, 34 ಮತ್ತು 28 ಎ ರಂತೆ ಹೊರಿಸಿದ್ದು ಜಪ್ತಿಯಾದ ಸ್ವತ್ತುಗಳನ್ನು ಕಲಂ 43ಎ (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿದ್ದು, ಆರೋಪಣಾ ಸಾರಾಂಶ ಈ ಕೆಳಗಿನಂತಿದೆ.

1. ಈ ಪ್ರಕರಣದ ಫಿರ್ಯಾದುದಾರರು ತನ್ನ ಸಿಬ್ಬಂದಿಗಳೊಂದಿಗೆ ದಿನಾಂಕ: 29.11.99 ರಂದು ಬೆಳಗಿನ ಜಾವ 3.00 ಗಂಟೆಯ ಸಮಯಕ್ಕೆ ಮಾಜಾಳಿ ತನಿಖಾ ಠಾಣೆಯಲ್ಲಿ ಕರ್ತವ್ಯನಿರತರಾಗಿ ವಾಹನಗಳ ತಪಾಸಣೆಯ ಕಾರ್ಯದಲ್ಲಿದ್ದಾಗ ಗೋವಾ ರಾಜ್ಯದ ಕಡೆಯಿಂದ ಮಾಜಾಳಿ ತನಿಖಾ ಠಾಣೆಗೆ ಬಂದು ನಿಂತ ಅಶೋಕ ಲೈಲಾಂಡ್ ಲಾರಿ ಸಂಖ್ಯೆ: ಟಿಎನ್-21/ವಿ-0545 ನೇದನ್ನು ತಪಾಸಣೆ ಮಾಡಲಾಗಿ, ಅದರಲ್ಲಿ ಒಟ್ಟು 279 ಪೆಟ್ಟಿಗೆ ಖೊಡೇಸ್ ತ್ರಿಎಕ್ಸ್ ರಂ ಎಂಬ ಮುದ್ರೆಯ ಮದ್ಯದ ಪೆಟ್ಟಿಗೆಗಳನ್ನು ಅಕ್ರಮವಾಗಿ ಸಾಗಿಸುತ್ತಿರುವದನ್ನು ಪತ್ತೆ ಹಚ್ಚಿ ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11,14 ಮತ್ತು 15 ರಂತೆ ಅಪರಾಧವಾಗಿರುವದರಿಂದ ಕಲಂ 32,34 ಹಾಗೂ 38ಎ ರಂತೆ ಶಿಕ್ಷಾರ್ಹವಾಗಿರುವದರಿಂದ ಮಾಜಾಳಿ ತನಿಖಾ ಠಾಣೆಯಲ್ಲಿ ತನ್ನ ಫಿರ್ಯಾದನ್ನು ದಾಖಲಿಸಿ ಗುನ್ಹೆ ಸಂಖ್ಯೆ: 01/99-2000 ರಂತೆ ಪ್ರ.ಮಾ.ವರದಿ ಪಂಚನಾಮೆ ಮತ್ತು ಸ್ವತ್ತಿನ ಪಟ್ಟಿಯನ್ನು ಈ ಪ್ರಾಧಿಕಾರದಲ್ಲಿ ಹಾಜರುಪಡಿಸಿ ಮುಂದಿನ ಕ್ರಮಕ್ಕಾಗಿ ವಿನಂತಿಸಿಕೊಂಡಿರುತ್ತಾರೆ.

2. ಈ ಪ್ರಕರಣದ ಆರೋಪಿಗಳಾದ ಲಾರಿಯ ಚಾಲಕ ಡಿ. ಭಾಸ್ಕರನ್ ದೊರೈರಾಜ ಮನೆ ನಂಬರ 28 ನ್ಯೂ ವನಿಯಾಕುಲಾ ಸ್ಟ್ರೀಟ್ ತಿರುವನ್ನಮಲೈ ಮತ್ತು ವಾಹನದ ಮಾಲೀಕರಾದ ಥೀರು ಎ. ಪನೀರಸೆಲ್ವಂ ನಂ. 20 ಲಕ್ಷ್ಮೀಪುರಂ ತಿರುಮಲೈ ಜಿಲ್ಲೆ ಇವರಿಗೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುವದಕ್ಕಾಗಿ ಕಾರಣ ಕೇಳಿ ನೋಟಿಸನ್ನು ಈ ಪ್ರಾಧಿಕಾರದ ನೋಂದಾಯಿತ ಅಂಚೆ ಮೂಲಕ ದಿನಾಂಕ: 15.12.99 ರಂದು ಕಳುಹಿಸಲಾಗಿ ಡಿ. ಭಾಸ್ಕರನ್ ದೊರೈರಾಜ ಇವರಿಗೆ ಕಳುಹಿಸಿದ ಅಂಚೆ ಲಕೋಟೆಯು ಇಂತಹ ವಿಳಾಸದವರು ಯಾರೂ ಇರುವುದಿಲ್ಲವಾಗಿ ಮರಳಿ ಬಂದಿದ್ದು, ತಿರು ಎ. ಪನೀರಸೆಲ್ವಂ ಇವರು ಸದ್ರಿ ನೋಟಿಸನ್ನು ದಿನಾಂಕ: 28.12.99 ರಂದು ಸ್ವೀಕರಿಸಿ ದಿನಾಂಕ: 10.1.2000 ರಂದು ತನ್ನ ವಕೀಲರಾದ ಶ್ರೀ ಪಿ.ಎಂ. ನಾಯ್ಕ, ಇವರ ಮೂಲಕ ತನ್ನ ಸಮಜಾಯಿಷಿಯನ್ನು ಸಲ್ಲಿಸುತ್ತಾ, ಸದ್ರಿ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ.

3. ಈ ಪ್ರಕರಣದ ಫಿರ್ಯಾದುದಾರರು ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಅದರಲ್ಲಿ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು 31.9 ಯು.ಪಿ. ಆಗಿದ್ದು ಅದು ಮಾನವ ಸೇವನೆಗೆ ಯೋಗ್ಯವಿರುವುದಾಗಿ ತಜ್ಞರು ಅಭಿಪ್ರಾಯ ಪಟ್ಟಿದ್ದರಿಂದ ಜಪ್ತಿಯಾದ ಮದ್ಯದ ಪೆಟ್ಟಿಗೆಗಳು ತನ್ನದೆಂದು ತಿಳಿಸಿ ಸಮಾಧಾನಕರವಾದ ರುಜುವಾತನ್ನು ಯಾರೂ ಈ ಪ್ರಾಧಿಕಾರದಲ್ಲಿ ಹಾಜರುಪಡಿಸದಿದ್ದುದರಿಂದ ಸದ್ರಿ ಮದ್ಯದ ಪೆಟ್ಟಿಗೆಗಳನ್ನು ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ:ಸಿಆರ್‌ಎಂ:ಡಿಟಿಸಿಆರ್:162:99-2000 ದಿನಾಂಕ: 5.1.2000 ರಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಲಾಗಿರುತ್ತದೆ.

4. ಅರ್ಜಿದಾರರು ದಿನಾಂಕ: 22.3.2000 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸುತ್ತಾ, ಈ ಗುನ್ಹೆಯನ್ನು ಕಲಂ 45 ರಂತೆ ಇಲಾಖಾ ಮೂಲಕ ಇತ್ಯರ್ಥಗೊಳಿಸಲು ವಿನಂತಿಸಿರುತ್ತಾರೆ.

5. ಆನಂತರ ದಿನಾಂಕ: 27.6.2000 ರಂದು ಪ್ರಕರಣದಲ್ಲಿ ಜಪ್ತಿಯಾದ ವಾಹನದ ಮಾಲೀಕ ಹಾಗೂ ಅರ್ಜಿದಾರರಾದ ತಿರು.ಎ.ಪನೀರಸೆಲ್ವಂ ಇವರು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸುತ್ತಾ, ಈ ಅಪರಾಧವನ್ನು ತಾನು ಎಸಗಿರದೇ ತನ್ನ ವಾಹನದ ಚಾಲಕನು ಎಸಗಿದ್ದು, ಈ ಪ್ರಕರಣವನ್ನು ತಾನು ಮುನ್ನಡೆಸಲು ಇಚ್ಛಿಸುವುದಾಗಿ ವಿನಂತಿಸಿರುತ್ತಾರೆ.

6. ತನಿಖಾಧಿಕಾರಿಗಳು ಸಲ್ಲಿಸಿರುವ ರಾಸಾಯನಿಕ ವಿಶ್ಲೇಷಣಾ ವರದಿ ಹಾಗೂ ಅರ್ಜಿದಾರರ ಹೇಳಿಕೆಯನ್ನಾಧರಿಸಿ ವಿಚಾರಣೆಯನ್ನು ಪ್ರಾರಂಭಿಸಲಾಗಿ, ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯು 1 ರಿಂದ 3 ರವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ 1 ರಿಂದ 4 ರವರೆಗೆ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಎದುರುದಾರರ ಪಕ್ಷದವರು ಅಭಿಯೋಜನೆ ಪಕ್ಷದವರ ಸಾಕ್ಷ್ಯಗಳನ್ನು ಅಲ್ಲಗಳೆದು ತಮ್ಮ ತರ್ಫೆ ಯಾವುದೇ ರೀತಿಯ ಸಾಕ್ಷಿಗಳನ್ನು ಮಾಡಿಸಿರುವುದಿಲ್ಲ. ಅನಂತರ ವಾದ ವಿವಾದಕ್ಕಾಗಿ ಎರಡು ಬಾರಿ ಎದುರುದಾರರ ಪಕ್ಷದವರಿಗೆ ಆಹ್ವಾನಿಸಲಾಗಿ, ಸದ್ರಿಯವರು ತನ್ನ ವಾದ ವಿವಾದವನ್ನು ಮಂಡಿಸದೇ ಇರುವದರಿಂದ ಅವರ ಪರ ವಾದವಿರುವುದಿಲ್ಲವೆಂದು ಪರಿಗಣಿಸಿ ಅಭಿಯೋಜನೆ ಪರ ವಾದವನ್ನು ಆಲಿಸಲಾಯಿತು.

7. ವಾದಿ ಮತ್ತು ಪ್ರತಿವಾದಿಗಳ ಪರ ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಕಾಣಿಸಿದ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

ಅ. ದಿನಾಂಕ: 29.11.99 ರಂದು ಬೆಳಗಿನ ಜಾವ 3-00 ಗಂಟೆಯ ಸಮಯಕ್ಕೆ ಗೋವಾ ರಾಜ್ಯದ ಕಡೆಯಿಂದ ಮಾಜಾಳಿ ತನಿಖಾ ಠಾಣೆಗೆ ಬಂದು ನಿಂತಿದ್ದ ಅಶೋಕ ಲೈಲಾಂಡ ಲಾರಿ ಸಂಖ್ಯೆ:ಟಿಎನ್-21/ವಿ-0545 ನೇದರಲ್ಲಿ ಒಟ್ಟು 279 ಪೆಟ್ಟಿಗೆ ಅಂದರೆ 2410.560 ಲೀಟರ್ ಮದ್ಯವನ್ನು ಅಕ್ರಮವಾಗಿ ಸಾಗಿಸಲಾಗುತ್ತಿತ್ತೇ? ಅಥವಾ ಇಲ್ಲವೇ.

ಬಿ. ಈ ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಸದ್ರಿ ಅಕ್ರಮ ಮದ್ಯ ಮತ್ತು ಸರಾಯಿಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ.

ಕ. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವದು ಯೋಗ್ಯವೇ? ಅಥವಾ ಇಲ್ಲವೇ.

ಅಂಶ1: ಸಕಾರಾತ್ಮಕವಾಗಿ

ಅಂಶ2: ಸಕಾರಾತ್ಮಕವಾಗಿ

ಅಂಶ3: ಸಕಾರಾತ್ಮಕವಾಗಿ

**ಕಾರಣಗಳು**

8. ಅಂಶ1: ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಈ ಪ್ರಕರಣದ ಫಿರ್ಯಾದುದಾರರಾದ ಎಸ್.ಎಸ್. ಖತೀಬ್ ಇವರು ದಿನಾಂಕ: 11.12.2002 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಅಭಿಯೋಜನೆ ಪರವಾಗಿ ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ಪಿಡಬ್ಲ್ಯು 1 ರಂತೆ ಸಾಕ್ಷಿ ನುಡಿಯುತ್ತಾ, ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ನಂತರ ದಿನಾಂಕ: 10.12.2003 ರಂದು ಎದುರುದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಮಾಜಾಳಿ ಬಸ್‌ಸ್ಟಾಂಡ್ ತನ್ನ ಚೆಕ್ ಪೋಸ್ಟ್‌ದಿಂದ ಸಾಕಷ್ಟು ದೂರದಲ್ಲಿದ್ದು ಮಾಜಾಳಿ ಚೆಕ್ ಪೋಸ್ಟ್ ಹತ್ತಿರ ಯಾವುದೇ ವಾಸದ ಮನೆಗಳಿರುವುದಿಲ್ಲವಾಗಿಯೂ ಆದರೆ ಇತರೆ ಇಲಾಖೆಗಳ ಕಚೇರಿಗಳು ಮತ್ತು ಒಂದು ಹೊಟೇಲ್ ಇದ್ದು ಇತರೇ ಕಚೇರಿಗಳಲ್ಲಿ ವಾಚ್‌ಮನ್‌ಗಳು ಇರುತ್ತಾರೆನ್ನುವುದು ಸರಿಯೆಂದೂ, ಅಲ್ಲದೇ ಹೊಟೇಲಿನಲ್ಲಿ ಯಾರು ಇರಲಿಲ್ಲವೆಂದೂ, ಈ ಪ್ರಕರಣದಲ್ಲಿ ತಾನೇ ತನಿಖಾಧಿಕಾರಿಯಾಗಿದ್ದರೂ ತನಿಖೆ ನಡೆಯುತ್ತಿರುವಾಗಲೇ ತನ್ನ ನಿವೃತ್ತಿಯಾಗಿದ್ದರಿಂದ ಆರೋಪಣಾ ಪಟ್ಟಿಯನ್ನು ಘನ ನ್ಯಾಯಾಲಯಕ್ಕೆ ಸಲ್ಲಿಸಲಾಗಲಿಲ್ಲವೆಂದು ನುಡಿದಿರುತ್ತಾರೆ.

**9. ಇಲ್ಲಿ ಗಮನಿಸಬೇಕಾದ ಮುಖ್ಯಾಂಶವೇನೆಂದರೆ:** ಪಂಚನಾಮೆಯ ಸಮಯದಲ್ಲಿ ರಾತ್ರಿ 3-00 ಗಂಟೆಯಾಗಿದ್ದರಿಂದ ಅಂತಹ ಸಮಯದಲ್ಲಿ ಇತರೇ ಕಚೇರಿಯ ವಾಚ್‌ಮನ್‌ರನ್ನು ಎಬ್ಬಿಸುವುದು ಕಷ್ಟಕರಕೆಲಸವೆಂದು ಕಂಡು ಬರುತ್ತದೆ. ಅಲ್ಲದೇ ಹೊಟೇಲ್‌ನಲ್ಲಿ ಸಹ ಯಾರೂ ಇರದಿದ್ದುದರಿಂದ ಸ್ಥಳೀಯ ಪಂಚರನ್ನು ಪಡೆಯಲು ಅಸಾಧ್ಯವಾಗಿರುವುದು ಕಂಡುಬರುತ್ತದೆ. ಆದಾಗ್ಯೂ ಸ್ವತಂತ್ರ ಪಂಚರನ್ನು ಫಿರ್ಯಾದಿ ಕಡೆಯವರು ಪಂಚನಾಮೆಯಲ್ಲಿ ಬಳಸಿರುವುದರಿಂದ ಬೇರೆಯವರನ್ನು ಕರೆಸುವ ಪ್ರಶ್ನೆ ಉದ್ಭವಿಸುವುದಿಲ್ಲ. ಇದನ್ನು ಹೊರತುಪಡಿಸಿ ಎದುರುದಾರರಿಗೆ ಸಹಾಯಕವಾಗುವಂತಹ ಯಾವುದೇ ಪ್ರಶ್ನೆಯನ್ನು ಕೇಳಿರುವುದು ಕಂಡು ಬರುವುದಿಲ್ಲ.

10. ಆನಂತರ ದಿನಾಂಕ: 10.12.2003 ರಂದು ಈ ಪ್ರಕರಣದ ಪಂಚಸಾಕ್ಷಿ ನಂ. 1 ನೆಯವರಾದ ಪ್ರಮೋದ ಬಾಬು ತಾಮ್ಸೆ ಇವರು ಪಿಡಬ್ಲ್ಯು 2 ರಂತೆ ತನ್ನ ಸಾಕ್ಷಿಯನ್ನು ನುಡಿಯುತ್ತಾ, ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ಸರಿಯಾಗಿ ಉತ್ತರಿಸಿ ಪಂಚನಾಮೆಯಲ್ಲಿನ ಅಂಶಗಳನ್ನು ಸಮರ್ಥಿಸಿ ಕೊಂಡಿರುತ್ತಾರೆ. ಹಾಗೂ ಪಂಚನಾಮೆಯನ್ನು ಸ್ಥಳದಲ್ಲಿಯೇ ಬರೆದಿರುವುದಾಗಿಯೂ ಮತ್ತು

ಅದರಲ್ಲಿ ಬರೆದ ವಿಷಯವು ತನಗೆ ಗೊತ್ತಿರುವುದಾಗಿಯೂ ನುಡಿದಿರುತ್ತಾರೆ. ನಂತರ ಎದುರುದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ, ತಾನು 9ನೇಯ ಇಯತ್ತೆವರೆಗೆ ಶಾಲೆ ಕಲಿತಿದ್ದು ಗೋವಾಕ್ಕೆ ಹೋದ ವರ್ಷ ತಾರೀಖು ತನಗೆ ಗೊತ್ತಿಲ್ಲವೆಂದು ಸಮಯದ ಬಗ್ಗೆ ಕೇಳಲಾಗಿ ಸಾಕ್ಷಿಯು ಸುಮ್ಮನಿದ್ದು, ಅಬಕಾರಿ ಸಿಬ್ಬಂದಿಗಳು ಒಟ್ಟು 5 ಜನ ಮತ್ತು ತನ್ನನ್ನು ಸೇರಿ ಒಟ್ಟು 6 ಜನ ಇದ್ದರೆಂದೂ, ವಾಹನದ ಸಂಖ್ಯೆಯನ್ನು ಕೇಳಲಾಗಿ ಏನು ಹೇಳದೇ ಸುಮ್ಮನಿದ್ದು ಆರೋಪಿಯನ್ನು ಬೆನ್ನಟ್ಟಿ ತಾನು ಹೋಗಿರಲಿಲ್ಲವೆಂದು ತಾನು ಸ್ಥಳದಲ್ಲಿಯೇ ಇದ್ದೆನೆಂದು ನುಡಿದಿರುತ್ತಾರೆ. ಹಾಗೂ ತಾನು ಪಂಚನಾಮೆಗೆ ಹೋಗಿರುವುದಿಲ್ಲ ಮತ್ತು ಲಾರಿ ಹಾಗೂ ಮದ್ಯವನ್ನು ಜಪ್ತು ಮಾಡಿರುವುದು ಇರುವುದಿಲ್ಲವೆನ್ನುವುದು ಸುಳ್ಳೆಂದು ನುಡಿದಿರುತ್ತಾರೆ.

**11. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:** ಗುನ್ಹೆ ದಾಖಲಾಗಿ 4 ವರ್ಷ 12 ತಿಂಗಳುಗಳು ಕಳೆದ ನಂತರ ಈ ಸಾಕ್ಷಿದಾರರು ಸಾಕ್ಷಿ ನುಡಿದಿರುವುದರಿಂದ ಸಹಜವಾಗಿ ಘಟನೆಯ ತಾರೀಖನ್ನು ಹಾಗೂ ಜಪ್ತಿಯಾದ ವಾಹನದ ಸಂಖ್ಯೆಯನ್ನು ಮರೆತಿರಬಹುದು. ಏಕೆಂದರೆ ಇವರು ಕೇವಲ 9ನೇ ಇಯತ್ತೆವರೆಗೆ ಮಾತ್ರ ಶಾಲೆ ಕಲಿತಿರುವುದಾಗಿ ತನ್ನ ಹೇಳಿಕೆಯಲ್ಲಿ ತಿಳಿಸಿರುತ್ತಾರೆ.

12. ದಿನಾಂಕ: 7.1.2004 ರಂದು ಈ ಪ್ರಕರಣದ ಪಂಚ ಸಾಕ್ಷಿ ನಂ. 2 ನೇಯವರಾದ ದಿನಕರ ಕಾಶೀನಾಥ ದೇಸಾಯಿ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿಡಬ್ಲ್ಯು 3 ರಂತೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರಿಸಿ ಪಂಚನಾಮೆಯಲ್ಲಿನ ಅಂಶಗಳನ್ನು ಸಮರ್ಥಿಸಿಕೊಳ್ಳುತ್ತಾ, ಗುನ್ಹೆಯನ್ನು ದಾಖಲಿಸಿ ಬಹಳವರ್ಷಗಳಾಗಿದ್ದರಿಂದ ತಾನು ಪಂಚನಾಮೆಯಲ್ಲಿನ ಅಂಶಗಳನ್ನು ಸಮರ್ಥಿಸಿಕೊಳ್ಳುತ್ತಾ, ಗುನ್ಹೆಯನ್ನು ದಾಖಲಿಸಿ ಬಹಳ ವರ್ಷಗಳಾಗಿದ್ದರಿಂದ ತಾನು ಪಂಚನಾಮೆಯಲ್ಲಿನ ವಿಷಯವನ್ನು ಮರೆತಿದ್ದೇನೆ ಎನ್ನುವುದು ಸರಿಯೆಂದು ನುಡಿದಿರುತ್ತಾರೆ. ನಂತರ ಎದುರುದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ ತನಗೆ ಹುಟ್ಟಿದ ದಿನಾಂಕ ಮತ್ತು ವರ್ಷವು ಗೊತ್ತಿಲ್ಲವೆಂದೂ, ತಾನು 9ನೇ ಇಯತ್ತೆವರೆಗೆ ಶಾಲೆ ಕಲಿತಿರುತ್ತೇನೆಂದು ಗೋವಾಕ್ಕೆ ತಾನು ವಾಹನದ ಪೆಟ್ರೋಲ್ ಹಾಕಿ ಬರುವ ಉದ್ದೇಶದಿಂದ ಹೋಗುತ್ತಿರುತ್ತೇನೆಂದು ವಾಹನದಲ್ಲಿ ಮದ್ಯ ಹಿಡಿದ ವಿಷಯ ತನಗೆ ಗೊತ್ತಿಲ್ಲವೆನ್ನುವುದು ಸುಳ್ಳೆಂದು ಅಬಕಾರಿ ಇಲಾಖೆಯವರ ಬೆದರಿಕೆಗೆ ಸಹಿ ಮಾಡಿದೆನೆಂಬುದು ಸರಿಯಲ್ಲವೆಂದು ನುಡಿದಿರುತ್ತಾರೆ.

**13. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:** ಸದ್ರಿ ಸಾಕ್ಷಿಯು ತಾನೇ ಹೇಳಿರುವಂತೆ ಈ ಗುನ್ಹೆಯಲ್ಲಿನ ವಿಷಯವನ್ನು ಅವರು ಸಹಜವಾಗಿಯೇ ಮರೆತಿರಬಹುದು. ಏಕೆಂದರೆ ಈ ಸಾಕ್ಷಿಗೆ ತಾನು ಹುಟ್ಟಿದ ದಿನಾಂಕ ಮತ್ತು ಇಸ್ವಿಯ ಬಗ್ಗೆಯೇ ನೆನಪಿರದಿರುವುದಾಗಿ ತಿಳಿಸಿರುವುದರಿಂದ ಈ ಘಟನೆಯನ್ನು ಅವರು ಮರೆತಿರಲಾರರು ಎಂದು ಹೇಳಲು ಬರುವುದಿಲ್ಲ. ಆದರೆ ಅವರು ಈ ವಾಹನದಲ್ಲಿ ಮದ್ಯವನ್ನು ಹಿಡಿದಿರುವ ಅಂಶವನ್ನು ಅಲ್ಲಗಳೆದಿಲ್ಲ.

14. ಈ ಮೇಲಿನ ಮೂರು ಜನ ಸಾಕ್ಷಿಗಳು ಪಂಚನಾಮೆಯ ಪ್ರಕಾರ ಸಾಕ್ಷಿ ನುಡಿದು ಅಭಿಯೋಜನೆ ಪರ ಸಾಕ್ಷ್ಯವನ್ನು ರುಜುವಾತುಪಡಿಸಿರುವುದರಿಂದ ಒಂದನೆಯ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

**15. ಅಂಶ2:** ಎರಡನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅರ್ಜಿದಾರರಾಗಲೀ ಅಥವಾ ವಾಹನದ ಚಾಲಕರಾಗಲೀ ಈ ಪ್ರಾಧಿಕಾರದಲ್ಲಿ ಒಮ್ಮೆಯೂ ಹಾಜರಾಗಿರುವುದಿಲ್ಲ ಮತ್ತು ತನ್ನ ಪರ ಸಾಕ್ಷಿಯನ್ನು ನುಡಿದಿರುವುದಿಲ್ಲ. ತಾನು ಸಲ್ಲಿಸಬೇಕಿದ್ದ ಎಲ್ಲಾ ಅರ್ಜಿಗಳನ್ನು ತನ್ನ ವಕೀಲರ ಮುಖಾಂತರ ಸಲ್ಲಿಸಿದ್ದು, ಖುದ್ದಾಗಿ ಪ್ರಾಧಿಕಾರದಲ್ಲಿ ಒಮ್ಮೆಯೂ ಹಾಜರಾಗಿಲ್ಲ ಅಲ್ಲದೇ ಅರ್ಜಿದಾರರು ದಿನಾಂಕ: 27.6.2000 ರಂದು ಸಲ್ಲಿಸಿದ ತನ್ನ ಅರ್ಜಿಯಲ್ಲಿ ತನ್ನ ಚಾಲಕನು ಸದ್ರಿ ಕೃತ್ಯವನ್ನು ಎಸಗಿರುವುದನ್ನು ಒಪ್ಪಿಕೊಂಡಿರುವುದಲ್ಲದೆ ದಿನಾಂಕ: 22.3.2000 ರಂದು ಸಲ್ಲಿಸಿರುವ ಅರ್ಜಿಯಲ್ಲಿ ತನ್ನ ಸ್ವಂತ ವ್ಯಕ್ತಿಯು ಈ ಅಪರಾಧವನ್ನು ಎಸಗಿರುವುದರಿಂದ ಈ ಗುನ್ಹೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 45ರಂತೆ ಇತ್ಯರ್ಥಗೊಳಿಸಲು ಸಹ ವಿನಂತಿಸಿರುವುದರಿಂದ ಸದ್ರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಇದಕ್ಕಿಂತ ಹೆಚ್ಚಿನ ಹೇಳಿಕೆ ಏನೂ ಅರ್ಜಿದಾರರಿಂದ ನಿರೀಕ್ಷಿಸಲು ಬರಲಾರದು. ಇದೇ ಕಾರಣದಿಂದ ಅವರು ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಸಾಕ್ಷಿಯನ್ನು ನುಡಿಯದೇ ಇರುವುದು ವ್ಯಕ್ತವಾಗುವುದರಿಂದ ಎರಡನೆಯ ವಿವಾದಾಂಶವನ್ನು ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಲು ಅರ್ಜಿದಾರರ ಪಕ್ಷದವರು ವಿಫಲರಾಗಿರುವುದು ಕಂಡು ಬರುತ್ತದೆ.

**16. ಅಂಶ3:** ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತಿಯಾಗಿರುವ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಸದ್ರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 78/2000 ದಿನಾಂಕ:7.11.2003 ರಲ್ಲಿ ನೀಡಿರುವ ತೀರ್ಪಿನಲ್ಲಿ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಿ ಈ ಕೆಳಕಾಣಿಸಿದಂತೆ

**ಆದೇಶ**

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ಎ(1)ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಮಾಜಾಳಿ ತನಿಖಾ ಠಾಣೆಯ ಪ್ರಭಾರಿ ಅಬಕಾರಿ ಉಪ ಅಧೀಕ್ಷಕರ ಗುನ್ಹೆ ಸಂಖ್ಯೆ:1/99-2000 ದಿನಾಂಕ: 29.11.99 ರಲ್ಲಿ ಜಪ್ತಿಯಾದಂತಹ ಅಶೋಕ ಲೈಲಾಂಡ್ ಲಾರಿ ಸಂಖ್ಯೆ: ಟಿಎನ್-21/ವಿ-0545 ನೇದನ್ನು ಕಲಂ 43 ಎ (2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಈ ಆದೇಶವು ಅರ್ಜಿದಾರರ ಪರ ವಕೀಲರಿಗೆ ದೊರಕಿದ 30 ದಿನಗಳ ನಂತರ ಜಾರಿಗೆ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಫೆಬ್ರುವರಿ ತಿಂಗಳ 27ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಬೆರಳಚ್ಚು ಮಾಡಿಸಿ, ಬೆರಚ್ಚಿಸಿದ ಪ್ರತಿಯನ್ನು ತಿದ್ದಿದ ನಂತರ ಗಣಕೀಕೃತಗೊಳಿಸಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು).

**ಕೆ. ಸಿ. ಹರಿದಾಸ**

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾ ್ಯಸಿಕ್ಯೂಶನ್ ಪರ ಸಾಕ್ಷಿದಾರರ ಪರ ಪಟ್ಟಿ)**

| | | | |
|---|---|---|---|
| 1. | ಪಿಡಬ್ಲ್ಯೂ-1 | : | ಎಸ್.ಎಸ್. ಖತೀಬ್, ಅ.ಉ.ಅ. |
| 2. | ಪಿಡಬ್ಲ್ಯೂ-2 | : | ಪ್ರಮೋದ ಬಾಮು ತಾಮಸೆ |
| 3. | ಪಿಡಬ್ಲ್ಯೂ-3 | : | ದಿನಕರ ಕಾಶೀನಾಥ ದೇಸಾಯಿ |

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರಪಟ್ಟಿ)**

-ಇಲ್ಲಾ-

**ಅನುಬಂಧ-3**

**ಅಭಿಯೋಜಕರ ಪರ ಗುರ್ತಿಸಲಾದ ದಾಖಲೆಗಳು**

| | | | |
|---|---|---|---|
| 1. | ಇಎಕ್ಸ್‌ಪಿ-1 | : | ಪಂಚನಾಮೆ |
| 2. | ಇಎಕ್ಸ್‌ಪಿ-1ಎ | : | ಪಂಚಸಾಕ್ಷಿ ಒಂದನೆಯವರ ಸಹಿ |
| 3. | ಇಎಕ್ಸ್‌ಪಿ-1ಬಿ | : | ಪಂಚಸಾಕ್ಷಿ ಎರಡನೆಯವರ ಸಹಿ |
| 4. | ಇಎಕ್ಸ್‌ಪಿ-1ಸಿ | : | ಹಾಜರಿದ್ದ ಸಿಬ್ಬಂದಿ ನಂ. 1ನೆಯವರ ಸಹಿ |
| 5. | ಇಎಕ್ಸ್‌ಪಿ-1ಡಿ | : | ಹಾಜರಿದ್ದ ಸಿಬ್ಬಂದಿ ನಂ. 3ನೆಯವರ ಸಹಿ |
| 6. | ಇಎಕ್ಸ್‌ಪಿ-1ಇ | : | ಫಿರ್ಯಾದುದಾರರ ಸಹಿ |
| 7. | ಇಎಕ್ಸ್‌ಪಿ-2 | : | ಫಿರ್ಯಾದು |
| 8. | ಇಎಕ್ಸ್‌ಪಿ-2ಎ | : | ಫಿರ್ಯಾದುದಾರರ ಸಹಿ |
| 9. | ಇಎಕ್ಸ್‌ಪಿ-3 | : | ಸ್ವತ್ತಿನ ಪಟ್ಟಿ |
| 10. | ಇಎಕ್ಸ್‌ಪಿ-3ಎ | : | ಸ್ವತ್ತಿನ ಪಟ್ಟಿಯ ಮೇಲಿನ ಸಹಿ |
| 11. | ಇಎಕ್ಸ್‌ಪಿ-4 | : | ರಾಸಾಯನಿಕ ವಿಶ್ಲೇಷಣಾ ವರದಿ |
| 12. | ಇಎಕ್ಸ್‌ಪಿ-4ಎ | : | ತನಿಖಾಧಿಕಾರಿಯವರ ಸಹಿ |

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

-ಇಲ್ಲಾ-

**ಕೆ. ಸಿ. ಹರಿದಾಸ**

ಪಿ.ಆರ್.395 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

## ಲೋಕೋಪಯೋಗಿ ಇಲಾಖೆ

### ಅಧಿಸೂಚನೆ

**ಸಂ: ಲೋಇ: 418: ಸೇಎಸು 2003 ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2004**

ಪ್ರಸ್ತುತ ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1 x ವಿದ್ಯುತ್) ಹುದ್ದೆಗಳನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಿಂದ ನಿಯೋಜನೆ ಮೂಲಕ ಭರ್ತಿಮಾಡಲಾಗುತ್ತಿದೆ.

ಸರ್ಕಾರದ ಅಧಿಸೂಚನೆ ಸಂ. ಡಿಪಿಎಆರ್ 10 ಎಸ್‌ಆರ್‌ಡಿ 98 ದಿನಾಂಕ: 9.2.2000 ರಲ್ಲಿ ರಚಿಸಿರುವ ವಿಶೇಷ ನಿಯಮಗಳ ಮೂಲಕ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಿಂದ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಹೆಚ್.ವಿ. ಕಾಂತರಾಜಪ್ಪ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿದ್ಯುತ್) ಇವರ ಸೇವೆಯನ್ನು ಲೋಕೋಪಯೋಗಿ ಇಲಾಖೆಯ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

ಆದೇಶ ಸಂ. ಲೋಇ 418 ಸೇಎಸು 2003 ದಿನಾಂಕ: 24.1.2004ರಲ್ಲಿ ಲೋ.ಇ.ಯಲ್ಲಿನ ಸ.ಕಾ.ಇಂ. (ವಿ) ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರ್ಹ ಇಂಜಿನಿಯರುಗಳಿಗೆ ಕಾ.ಇಂ. (ವಿ) ಹುದ್ದೆಗೆ ಪದೋನ್ನತಿ ನೀಡಲು ಅನುಕೂಲವಾಗುವಂತೆ ನೇಮಕಾತಿ ವಿಧಾನವನ್ನು ನಿಗದಿಪಡಿಸಿ ಕಾರ್ಯಕಾರಿ ಆದೇಶವನ್ನು ಹೊರಡಿಸಲಾಗಿದೆ. ಪ್ರಸ್ತುತ ಲೋ.ಇ.ಯಲ್ಲಿನ ಸ.ಕಾ.ಇಂ. (ವಿ-1)(ವಿದ್ಯುತ್) ವೃಂದದ ಪ್ರತ್ಯೇಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಅವಶ್ಯಕತೆ ಉಂಟಾಗಿದೆ. ಆದುದರಿಂದ ಸ.ಕಾ.ಇಂ. (ವಿ-1)(ವಿದ್ಯುತ್) ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಇದರೊಂದಿಗಿರುವ ಅನುಬಂಧದಲ್ಲಿ ಪ್ರಕಟಿಸಲಾಗಿದೆ. ಈ ಜೇಷ್ಠತಾ ಪಟ್ಟಿಯಲ್ಲಿ ಹೇಳಲಾಗಿರುವ ಅಧಿಕಾರಿಯವರ ಜೇಷ್ಠತೆಯಿಂದ ಬಾಧಿತರಾಗುವ ಅಧಿಕಾರಿ: ನೌಕರರು ಯಾವುದೇ ಆಕ್ಷೇಪಣೆಗಳಿದ್ದಲ್ಲಿ, ಅಥವಾ ತಮ್ಮಗಳ ಹೆಸರನ್ನು ಈ ಜೇಷ್ಠತಾ ಪಟ್ಟಿಯಲ್ಲಿ ಸೇರಿಸಬೇಕಾದ ಸಂದರ್ಭ ಇದ್ದಲ್ಲಿ ಅಂತಹ ಅಧಿಕಾರಿ: ನೌಕರರು ಸಮರ್ಥನೆ ನೀಡುವ ದಾಖಲಾತಿಗಳೊಂದಿಗೆ, ಈ

ಅಧಿಸೂಚನೆ ಹೊರಡಿಸಿದ ಹತ್ತು ದಿನದೊಳಗಾಗಿ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಬಹುಮಹಡಿಗಳ ಕಟ್ಟಡ, 5ನೇ ಹಂತ, ಡಾ: ಅಂಬೇಡ್ಕರ್ ವೀದಿ, ಬೆಂಗಳೂರು-1, ಇವರಿಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದು, ನಿಗದಿತ ಅವಧಿಯ ನಂತರ ಸ್ವೀಕರಿಸಿದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ. (ಸೇವೆಗಳು-ಎ).

**ಅಧಿಸೂಚನೆ ಸಂ. ಲೋಇ 418 ಸೇಎಸು 2003 ದಿನಾಂಕ: 20.2.2004ಕ್ಕೆ ಅನುಬಂಧ**

**ಸ.ಕಾ.ಇಂ. (ವಿ-1x ವಿದ್ಯುತ್) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ, ದಿನಾಂಕ: 31ನೇ ಜನವರಿ 2004 ರಲ್ಲಿದ್ದಂತೆ**

| ಜೇಷ್ಠತಾ ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಹುಟ್ಟಿದ ದಿನಾಂಕ | ಸ.ಕಾ.ಇಂ.(ವಿ-1) (ವಿದ್ಯುತ್) ಹುದ್ದೆಯನ್ನು ಹೊಂದಿರುವ ದಿನಾಂಕ |
|---|---|---|---|
| 1. | ಹೆಚ್.ಎ. ಕಾಂತರಾಜಪ್ಪ | 20.9.1954 | 23.11.1998 |

**ಸಿ. ಬಸವರಾಜು**

ಪಿ.ಆರ್. 397 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ. (ಸೇವೆಗಳು-ಎ).

**PUBLICATION CHARGES OF 'KARNATAKA GAZETTE"**
**FOR THE YEAR 2004-2005**

| Sl. No. | Particulars | | Rate Rs.Ps. |
|---|---|---|---|
| 1. | Local bodies and Government Department A4 Size per page | ... | 1200-00 |
| 2. | Per line of 43 EMS or 2 lines of 21 EMS | ... | 17-50 |
| 3. | Private Bodies and Commercial Concerns (Like KEB, KSRTC, Etc.,) per page | ... | 1800-00 |
| 4. | Per line of 43 EMS or 2 lines of 21 EMS | ... | 26-00 |
| 5. | For matter occupying 1/2 of page or 1/4 of page | ... | $^1/_2$ or $^1/_4$ of above rates fixed for Sl. no. 1 & 3 |
| 6. | For matter occupying less than $^1/_4$ of page | ... | Rate per line as mentioned in item No. 2 & 4 |
| 7. | Charges for Spare copies per sheet (Irrespective of Size of Printed Sheet) | ... | 1-00 |

Director

**REVISED RATES OF SUBSCRIPTION CHARGES OF "KARNATAKA GAZETTE"**
**FOR THE YEAR 2004-2005**

| Sl. No. | Gazette Parts | | | Amounts Rs. Ps. |
|---|---|---|---|---|
| 1. | Part-I | | ... | 360-00 |
| 2. | Part-II | | ... | 135-00 |
| 3. | Part-III | | ... | 560-00 |
| 4. | Part-IV | | ... | 135-00 |
| 5. | Part-IV-A | | ... | 470-00 |
| 6. | Part-V | | ... | 370-00 |
| 7. | Part-VI | | ... | 190-00 |
| 8. | Part-VI-A | Mysore | ... | 980-00 |
| 9. | Part-VI-B | Dharwad | ... | 950-00 |
| 10. | Part-VI-C | Gulbarga | ... | 675-00 |
| 11. | Full Gazette | Sl. No. 1 to 7 | ... | 2200-00 |

Director

**REVISED RATES OF SELLING PRICE OF "KARNATAKA GAZETTE"**
**FOR THE YEAR 2004-2005 THROUGH GOVT. BOOK DEPOTS**

| Sl. No. | Gazette Parts | | Amounts Rs. Ps. |
|---|---|---|---|
| 1. | Part-I | ... | 9-00 |
| 2. | Part-II | ... | 4-00 |
| 3. | Part-III | ... | 14-00 |
| 4. | Part-IV | ... | 4-00 |

| Sl. No. | Gazette Parts | | | Amounts Rs. Ps. |
|---|---|---|---|---|
| 5. | Part-IV-A | | ... | 12-00 |
| 6. | Part-V | | ... | 9-00 |
| 7. | Part-VI | | ... | 5-00 |
| 8. | Part-VI-A | Mysore | ... | 25-00 |
| 9. | Part-VI-B | Dharwad | ... | 24-00 |
| 10. | Part-VI-C | Gulbarga | ... | 17-00 |
| 11. | Full Gazette | Sl. No. 1 to 7 | ... | 55-00 |
| 12. | Spare copies | A4 size per sheet | ... | 1-00 |

PR-411 Director

**4IT SOFTWARE SOLUTIONS (P) LTD.**

**4IT SOFTWARE SOLUTIONS PRIVATE LIMITED (in Liquidation)**

**Registered Office,; # 16/1, M, 1st Floor, Bhavani Mansion, American Colony, Crescent Road, Kumara Park East, Bangalore-560 001**

Notice is hereby given for general information that the members of 4IT SOFTWARE SOLUTIONS PRIVATE LIMITED at an extra ordinary general meeting of the Company held on Wednesday, February 25, 2004 at its Registered office, have passed the following resolutions to wind up the above Company voluntarily.

"RESOLVED that pursuant to the provisions of section 484(1)(b), consent of the shareholders be and is hereby given for winding up the Company.

"RESOLVED FURTHER that Shri K. Chandrashekarappa, Company Secretary, be and is hereby appointed as Liquidator of the Company for the purpose of winding up of the Company.

By Order of the Board
**Sanjay Singhania,**
Director

**4IT SOFTWARE SOLUTIONS (P) LTD.**

**FORM No. 151**

**Members' (or Creditor's) Voluntary Winding-up**

**Notice of appointment of liquidator pursuant to section 516**

| | |
|---|---|
| Name of Company | 4IT SOFTWARE SOLUTIONS PRIVATE LIMITED (in Liquidation) |
| Nature of business | To carry on the business of designing, developing software and related technologies. |
| Address of Registered Office | # 16/1, M, 1st Floor, Bhavani Mansion, American Colony, Crescent Road, Kumara park East, Bangalore-560 001 |
| Name(S) and addresses of Liquidator(s) | Chandrashekarappa K<br>Company Secretary<br>No. 10/A, 1st Floor, 50ft Road, 9th Main, BSK 1st Stage, 2nd Block, Bangalore-560 050 |
| Date of appointment | 25.2.2004 |
| By whom appointed | Members of the Company in their meeting held on 25.2.2004 |

PD-21

By Order of the Board
**Sanjay Singhania,**
Director

**VIIIth ADDL. CHIEF METROPOLITAN MAGISTRATE, BANGALORE**

ಈ ಮೇಲ್ಕಂಡ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ ಹೈಗ್ರೌಂಡ್ಸ್ ಪೊಲೀಸ್ ಠಾಣೆಯಲ್ಲಿ ವಾರಸುದಾರರಿಲ್ಲದ ಈ ಕೆಳಕಂಡ ಮಾಲುಗಳು ಪತ್ತೆಯಾಗಿದ್ದು ಈ ಮಾಲುಗಳ ವಾರಸುದಾರರನ್ನು ಪತ್ತೆ ಮಾಡಲು ಠಾಣಾ ವತಿಯಿಂದ ಎಲ್ಲಾ ಪ್ರಯತ್ನಗಳನ್ನು ಮಾಡಿದ್ದು ಸದ್ಯಕ್ಕೆ ವಾರಸುದಾರರು ಪತ್ತೆಯಾಗಿರುವುದಿಲ್ಲ. ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಆದೇಶ ಮಾಡಲು ಕೋರಿರುತ್ತಾರೆ. ಪ್ರಯುಕ್ತ ಈ ಕೆಳಗೆ ನಮೂದು ಮಾಡಿರುವ ಮಾಲುಗಳ ವಿವರಗಳನ್ನು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಚುರ ಪಡಿಸಲು ಈ ಮೂಲಕ ಸೂಚಿಸಲಾಗಿದೆ.

| ಕ್ರ.ಸಂ. | ಮೊ.ನಂ. ಸಿಮಿಸ್ ನಂ. | ಪಿಎಫ್‌ನಂ. | ಮಾಲಿನ ವಿವರ | ಇಂಜಿನ್ ನಂ | ಚಾಸಿಸ್ ನಂ. |
|---|---|---|---|---|---|
| 1. | 423/03 | 56/03 | ಟಿವಿಎಸ್-50 ಕೆಎ-05-ಇಬಿ-102 | - | - |
| 2. | 375/03 | 79/03 | 1 ಪ್ರಿಯಾ ಸ್ಕೂಟರ್ ಸಿಎಆರ್-9423 | - | - |
| 3. | 434/03 | 105/03 | 2 ಹಳೆಯ ಸೈಕಲ್‌ಗಳು 5 ಕಬ್ಬಿಣದ ತುಂಡುಗಳು | - | - |

PR-408 VIIIth Addl. Chief Metropolitan Magistrate, Bangalore.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ :** ಶ್ರೀಮತಿ: ಮಾಲುಬಾಯಿ, ಕಿಮಆಸ. ಜಿಲ್ಲಾ ಆಕುಕ. ಕಛೇರಿ, ಬಳ್ಳಾರಿ, ಇವರ ಅ.ಗೈ ಹಾಜರಿ ಬಗ್ಗೆ ಇಲಾಖೆ ವಿಚಾರಣೆ: ಅಂತಿಮ ಆದೇಶ.

**ಓದಲಾಗಿದೆ :**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ: ಡಿಪಿಎನ್ (17) ಸಿಆರ್ -33: 00-01, ದಿನಾಂಕ: 25.10.2001.
2. ನೌಕರರ ಲಿಖಿತ ಅಹವಾಲು ಪತ್ರ ಸಲ್ಲಿಸಿರುವುದಿಲ್ಲ.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂ:ಡಿಪಿಎನ್ (17) ಸಿಆರ್-33:00-01, ದಿನಾಂಕ: 12.12.02
4. ವಿಚಾರಣಾ ವರದಿಯ ಸಂ:ವಿಅ:ವಿಚಾರಣೆ:ಎನ್‌ಜಿ:152: 2002-03, ದಿನಾಂಕ: 26.7.2003.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂ: ಡಿಪಿಎನ್ (17) ಸಿಆರ್-33: 00-01,
6. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 15.9.2003

**ಪ್ರಸ್ತಾವನೆ:**

ಶ್ರೀಮತಿ: ಮಾಲುಬಾಯಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಇವರು ಈ ಹಿಂದೆ ಜಿಲ್ಲಾ ಕಾಲರಾ ನಿಯಂತ್ರಣ ತಂಡ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 1.9.84 ರಿಂದ ಇಲ್ಲಿಯವರೆಗೆ ಇವರ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2)ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, (ಜಾ.ಕೋ.) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (5)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನು ಗುಣವಾಗಿ ಮೇಲೆ ಓದಲಾದ (6)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು, ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂ:ಡಿಪಿಎನ್ (17) ಸಿಆರ್: 33:00-01, ಬೆಂಗಳೂರು, ದಿನಾಂಕ:**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ. ಬಿ. ದೇಸಾಯಿ, ಆರೋಗ್ಯ ಮತ್ತು ಕು. ಕ. ಸೇವೆಗಳ ನಿರ್ದೇಶಕರು, ಆದ ನಾನು ಶ್ರೀಮತಿ: ಮಾಲುಬಾಯಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಜಿಲ್ಲಾ ಕಾಲರಾ ನಿಯಂತ್ರಣ ತಂಡ, ಬಳ್ಳಾರಿ, ಇವರು ದಿನಾಂಕ: 1.9.84 ರಿಂದ ಸೇವೆಗೆ ಅನಧಿಕೃತ ಗೈರು ಹಾಜರಿಯಾದ ಕಾರಣ ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ದಿನಾಂಕ: 1.9.94 ರಿಂದ ಅನ್ವಯವಾಗುವಂತೆ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದ್ದೇನೆ.

**ಡಾ: ಜಿ. ಬಿ. ದೇಸಾಯಿ**

ಪಿ.ಆರ್. 422 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂ:ಕಾಪಕಾ:ಎಫ್:ಎಸ್‌ಆರ್:27:2002**

**ಅರ್ಜಿದಾರರು:**
1. ಶ್ರೀಮತಿ ಬಿ. ಎ. ದುಲೇಖಾ @ ಜುಲೇಖಾ ಭಾನು ಕೋಂ ಲೇಟ್ ಮಹಮದ್ 20 ವರ್ಷ,
2. ಮಾ: ಮಸೂದ್ ಬಿನ್ ಲೇಟ್ ಮಹಮದ್, 7 ತಿಂಗಳು,
3. ಶ್ರೀಮತಿ: ಫಾತಿಮಾ ಕೋಂ. ಲೇಟ್ ಇಬ್ರಾಹಿಂ, 55 ವರ್ಷ,
ವಾಸ: ಬಂದಿಹಳ್ಳಿ ಗ್ರಾಮ, ಜಮ್ಮನಹಳ್ಳಿ ಅಂಚೆ, ಬೆಳಗೊಳು ಹೋಬಳಿ, ಸಕಲೇಶಪುರ ತಾ:

ವಿರುದ್ಧ

**ಪ್ರತಿವಾದಿಗಳು:**
1. ಶ್ರೀ ಬಿ. ಎ. ನಾಗೇಶ ಬಿನ್ ಡಿ. ಬಿ. ಅಣ್ಣೇಗೌಡ ಬನವಾಸೆ ಗ್ರಾಮ, ಬಾಳೂಪೇಟೆ ಅಂಚೆ, ಸಕಲೇಶಪುರ ತಾ:
2. ದಿ ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ., ಡಿವಿಜನಲ್ ಆಫೀಸ್, ಗಾಂಧಿಬಜಾರ್, ಹಾಸನ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮಹಮದ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 18.2.2002 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಪಿ.ಆರ್. 424 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ ಹಾಸನ.